# ಮಾನವ ಹಕ್ಕುಗಳ ಸಂರಕ್ಷಣೆಗಾಗಿ

## ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಮಾರ್ಗಸೂಚಿಗಳು



ಸಿಕ್ರಂ ನ ಪ್ರಕಾಶನ

# ಮಾನವ ಹಕ್ಕುಗಳ ಸಂರಕ್ಷಣೆಗಾಗಿ

## ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಮಾರ್ಗಸೂಚಿಗಳು



ಸಿಕ್ರಂ ನ ಪ್ರಕಾಶನ

ಮೂಲ ಕೃತಿ:

ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ

ಮೂಲ ಭಾಷೆ : ಇಂಗ್ಲೀಷ್

ಪ್ರಥಮ ಮುದ್ರಣ : ೨೦೦೩





# ಕೃತಜ್ಞತೆ

ಇದುವರೆಗೆ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ಹೊರಡಿಸಿದಂತಹ ಎಲ್ಲಾ ಮಾರ್ಗಸೂಚಿಗಳು ಕನ್ನಡದಲ್ಲಿ ದೊರೆಯದ ಕಾರಣ, ಸಿಕ್ರಂ ಇವುಗಳನ್ನು ಭಾಷಾಂತರಿಸಲು ಪ್ರಯತ್ನಿಸಿದೆ. ಅನೇಕ ತೊಡುಕುಗಳಿದ್ದರು ಸಹ, ಅಂತಿಮವಾಗಿ ನಾವು ಇದನ್ನು ಸಿದ್ಧಪಡಿಸಿದ್ದೇವೆ. ಇದು ಎಲ್ಲಾ ಮಾನವ ಹಕ್ಕುಗಳ ಸಂರಕ್ಷಣೆ ಮತ್ತು ಹೋರಾಟಗಾರರಿಗೆ ಉಪಯುಕ್ತವಾಗುತ್ತದೆಂದು ನಂಬುತ್ತೇವೆ.

ಭಾಷಾಂತರಿಸಲು ಅನುಕೂಲ ಮಾಡಿಕೊಟ್ಟ ಆಕ್ಷನ್ ಏಯ್ಡ್‌ರವರಿಗೂ, ಯುಥಾರ್ಥವಾಗಿ ಭಾಷಾಂತರಿಸಿದ ಶ್ರೀ ಬಾಬುರಾಜ್ ಮತ್ತು ಶ್ರೀಮತಿ ಉಷಾ ಬಾಬುರಾಜ್ ರವರಿಗೂ, ಕರಡಚ್ಚು ತಿದ್ದುಪಡಿ ಮತ್ತು ಮುದ್ರಣಕ್ಕೆ ಸಹಾಯ ಮಾಡಿದ ಶ್ರೀಮತಿ ಮಾರ್ಗರೆಟ್ ಸಂಪತ್ ಮತ್ತು ವಕೀಲರಾದ ಮನೋಹರ್ ಹೋಸಿಯ ರವರಿಗೂ ನಮ್ಮ ನಮನಗಳು.

ಈ ಪುಸ್ತಕವನ್ನು ಪ್ರಕಾಶನಗೊಳಿಸಲು ಸಹಕರಿಸಿದಂತಹ ನಮ್ಮ ಅಧ್ಯಕ್ಷರಾದ ಶ್ರೀ ಕೋಶಿ ಮ್ಯಾಥ್ಯೂರವರಿಗೆ ನಮ್ಮ ಕೃತಜ್ಞತೆಗಳು.

ಮ್ಯಾಥ್ಯೂ ಫಿಲಿಫ್
ಕಾರ್ಯನಿರ್ವಾಹಕ ನಿರ್ದೇಶಕ
ಸಿಕ್ರಂ

# ಪರಿವಿಡಿ

ಅಧ್ಯಾಯ I

## ಬಂಧನದಲ್ಲಿ ಸಂಭವಿಸಿದ ಸಾವಿನ ಪ್ರಕರಣಗಳ ವರದಿಯನ್ನು 24 ಗಂಟೆಗಳೊಳಗಾಗಿ ಸಲ್ಲಿಸುವುದರ ಕುರಿತಂತೆ ಎಲ್ಲ ಮುಖ್ಯ ಕಾರ್ಯದರ್ಶಿಗಳಿಗೆ ಬರೆಯಲಾಗಿರುವ ಪತ್ರ

ಸಂ.66/ಎಸ್‌ಜಿ/ಎನ್‌ಎಚ್‌ಆರ್‌ಸಿ/93

**ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ**
**ಸರ್ದಾರ್ ಪಟೇಲ್ ಭವನ**
**ನವದೆಹಲಿ**

ರಿಂದ 14 ಡಿಸೆಂಬರ್ 1993

**ಆರ್. ವಿ. ಪಿಳ್ಳೈ**
ಮಹಾ ಕಾರ್ಯದರ್ಶಿಗಳು

ರಿಗೆ

ಎಲ್ಲಾ ರಾಜ್ಯಗಳ ಮತ್ತು ಕೇಂದ್ರ ಶಾಸಿತ ಪ್ರದೇಶಗಳ ಮುಖ್ಯ ಕಾರ್ಯದರ್ಶಿಗಳು

ಮಾನ್ಯರೇ

6ನೇ ತಾರೀಖಿನಂದು ನಡೆಸಲ್ಪಟ್ಟ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಸಭೆಯಲ್ಲಿ ಬಂಧನದಲ್ಲಿ ಸಂಭವಿಸುವ ಸಾವು ಮತ್ತು ಬಂಧನದಲ್ಲಿ ಸಂಭವಿಸುವ ಅತ್ಯಾಚಾರವನ್ನು ಕುರಿತು ತುರ್ತು ಚರ್ಚೆ ನಡೆಸಿತು. ಇಂತಹ ಪ್ರಕರಣಗಳು ಹೆಚ್ಚಾಗುತ್ತಿದ್ದು, ಕಾಲಾವಧಿ ಮುಗಿಯುವುದರೊಂದಿಗೆ ಇಂತಹ ಪ್ರಕರಣಗಳನ್ನು ಮುಚ್ಚಿ ಹಾಕುವ ಅಥವಾ ವ್ಯತ್ಯಸ್ಥವಾದ ಚಿತ್ರಣ ನೀಡುವ ಪ್ರಯತ್ನಗಳು ಕೂಡ ಹೆಚ್ಚಾಗುತ್ತಿವೆ. ಇದನ್ನೆಲ್ಲ ದೃಷ್ಟಿಯಲ್ಲಿರಿಸಿಕೊಂಡು ಆಯೋಗವು ಎಲ್ಲಾ ಜಿಲ್ಲೆಗಳ ಜಿಲ್ಲಾ ಮ್ಯಾಜಿಸ್ಟ್ರೇಟರುಗಳು ಹಾಗೂ ಪೊಲೀಸ್ ಅಧೀಕ್ಷಕರಿಗೆ ನಿರ್ದೇಶನವೊಂದನ್ನು ರವಾನಿಸುವ ತೀರ್ಮಾನವನ್ನು ತೆಗೆದುಕೊಂಡಿತು. ಆ ಪ್ರಕಾರವಾಗಿ, ಈ ಅಧಿಕಾರಿಗಳು ಇಂತಹ ಘಟನೆಗಳು ಸಂಭವಿಸಿದ 24 ಗಂಟೆಗಳೊಳಗಾಗಿ ಆ ಬಗ್ಗೆ ಆಯೋಗದ ಮಹಾ ಕಾರ್ಯದರ್ಶಿಗಳಿಗೆ ವರದಿ ಮಾಡಿರಬೇಕು ಅಥವಾ ಆ ಬಗ್ಗೆ ಮಾಹಿತಿಯನ್ನು ಹೊಂದಿರಬೇಕು. ಕ್ಷಿಪ್ರವಾಗಿ ವರದಿ ಮಾಡುವುದಕ್ಕೆ ತಪ್ಪಿದಲ್ಲಿ ಪ್ರಕರಣವನ್ನು ಮುಚ್ಚಿ ಹಾಕುವ ಉದ್ದೇಶವನ್ನು ಹೊಂದಿರಬಹುದು ಎಂದು ಗ್ರಹಿಸುವ ಸಾಧ್ಯತೆಯನ್ನು ಅದು ಹೆಚ್ಚಿಸುತ್ತದೆ.

2. ಆದ್ದರಿಂದ, ಬಂಧನದಲ್ಲಿ ಸಂಭವಿಸಿದ ಸಾವು/ ಬಂಧಿತ ವ್ಯಕ್ತಿಗಳ ಮೇಲಿನ ಅತ್ಯಾಚಾರಗಳಿಗೆ ಸಂಬಂಧಿಸಿದ ಕ್ಷಿಪ್ರ ಮಾಹಿತಿಯನ್ನು ಈ ಕೆಳಗೆ ಸಹಿ ಮಾಡಿರುವವರಿಗೆ ತಪ್ಪದೆ ಸಲ್ಲಿಸುವಂತೆ ಮ್ಯಾಜಿಸ್ಟ್ರೇಟರುಗಳು/ಪೊಲೀಸ್ ಅಧೀಕ್ಷಕರುಗಳಿಗೆ ಸೂಕ್ತ ಆದೇಶ ನೀಡುವಂತೆ ಈ ಮೂಲಕ ಕೋರಲಾಗಿದೆ.

ತಮ್ಮ ವಿಶ್ವಾಸಿ,
ಸಹಿ/-
(ಆರ್. ವಿ. ಪಿಳ್ಳೈ)

## ಪೊಲೀಸ್ ಬಂಧನದಲ್ಲಿದ್ದಾಗ ಮಾತ್ರವಲ್ಲದೆ ನ್ಯಾಯಾಂಗ ಬಂಧನದಲ್ಲಿದ್ದಾಗ ಸಂಭವಿಸಿದ ಸಾವಿನ ಪ್ರಕರಣಗಳನ್ನು ಕೂಡ ವರದಿ ಮಾಡಬೇಕೆನ್ನುವುದನ್ನು ಸ್ಪಷ್ಟಪಡಿಸಿ ಎಲ್ಲ ಮುಖ್ಯ ಕಾರ್ಯದರ್ಶಿಗಳಿಗೆ ಬರೆದ ಪತ್ರ

ಆರ್. ವಿ. ಪಿಳ್ಳೈ
ಮಹಾ ಕಾರ್ಯದರ್ಶಿಗಳು

ಎಫ್. ಸಂ.40/3/95-ಎಲ್‌ಡಿ
ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ
ಜೂನ್ 21, 1995

ರಿಗೆ

ಎಲ್ಲಾ ರಾಜ್ಯಗಳ ಹಾಗೂ ಕೇಂದ್ರ ಶಾಸಿತ ಪ್ರದೇಶಗಳ ಮುಖ್ಯ ಕಾರ್ಯದರ್ಶಿಗಳಿಗೆ

ಮಾನ್ಯರೇ

ಪತ್ರ ಸಂ.66/ಎಸ್‌ಜಿಃಎನ್‌ಎಚ್‌ಆರ್‌ಸಿ/93, ದಿನಾಂಕ 14, 1993ರ ಪತ್ರದ ಮುಖಾಂತರ ಬಂಧನದಲ್ಲಿ ಸಂಭವಿಸಿದ ಸಾವುಃಬಂಧನದಲ್ಲಿ ಸಂಭವಿಸಿದ ಅತ್ಯಾಚಾರಗಳ ಪ್ರಕರಣಗಳಿಗೆ ಸಂಬಂಧಿಸಿದ ಕ್ಷಿಪ್ರ ಮಾಹಿತಿಯನ್ನು ಜಿಲ್ಲಾ ಮ್ಯಾಜಿಸ್ಟ್ರೇಟರುಗಳು ಹಾಗೂ ಪೊಲೀಸ್ ಅಧೀಕ್ಷಕರುಗಳು ತಪ್ಪದೆ ಸಲ್ಲಿಸುವಂತೆ ಆದೇಶ ನೀಡಬೇಕಾಗಿ ತಮ್ಮನ್ನು ಕೋರಲಾಗಿತ್ತು.

2 ಈ ಮೇಲೆ ಉಲ್ಲೇಖಿಸಲಾಗಿರುವ ಮಾಹಿತಿಗೆ ಸಂಬಂಧಿಸಿದಂತೆ ಜಿಲ್ಲಾ ಮ್ಯಾಜಿಸ್ಟ್ರೇಟರುಗಳು/ಪೊಲೀಸ್ ಅಧೀಕ್ಷಕರುಗಳಿಂದ ಮಾಹಿತಿ ಪಡೆದು ಕೆಲವು ರಾಜ್ಯಗಳು ಕಳುಹಿಸಿರುವ ವರದಿಗಳನ್ನು ಪರಿಶೀಲಿಸಲಾಗಿ ಅವುಗಳಲ್ಲಿ ಪೊಲೀಸ್ ಬಂಧನದಲ್ಲಿ ಸಂಭವಿಸಿದ ಸಾವಿನ ಪ್ರಕರಣಗಳು ಮಾತ್ರ ಉಲ್ಲೇಖಿಸಲ್ಪಟ್ಟಿರುವುದು ಕಂಡುಬಂದಿರುತ್ತದೆ. ಪೊಲೀಸ್ ಬಂಧನದಲ್ಲಿ ಮಾತ್ರವಲ್ಲದೆ ನ್ಯಾಯಾಂಗ ಬಂಧನದಲ್ಲಿ ಸಂಭವಿಸಿರಬಹುದಾದ ಸಾವಿನ ಪ್ರಕರಣಗಳ ಮಾಹಿತಿಯನ್ನು ಸಂಗ್ರಹಿಸುವುದು ಆಯೋಗದ ಉದ್ದೇಶವಾಗಿರುತ್ತದೆ. ಆದ್ದರಿಂದ, ದಿನಾಂಕ 14, 1993ರ ನನ್ನ ಪತ್ರದಲ್ಲಿ ಸೂಚಿಸಲಾಗಿರುವ ಕಾಲಾವಕಾಶದೊಳಗಾಗಿ ಪೊಲೀಸ್ ಬಂಧನದಲ್ಲಿ ಮಾತ್ರವಲ್ಲದೆ ನ್ಯಾಯಾಂಗ ಬಂಧನದಲ್ಲಿ ಸಂಭವಿಸಿರುವ ಸಾವಿನ ಪ್ರಕರಣಗಳ ವರದಿಯನ್ನು ಆಯೋಗಕ್ಕೆ ಸಲ್ಲಿಸುವಂತೆ ಸಂಬಂಧಪಟ್ಟವರಿಗೆ ಆದೇಶ ನೀಡಬೇಕೆಂದು ಈ ಮೂಲಕ ಕೋರುತ್ತೇನೆ.

ತಮ್ಮ ವಿಶ್ವಾಸಿ,

ಸಹಿ/-
(ಆರ್. ವಿ. ಪಿಳ್ಳೈ)

## ಬಂಧನದಲ್ಲಿ ಸಂಭವಿಸುವ ಸಾವಿನ ಪ್ರಕರಣಗಳ ಶವಪರೀಕ್ಷೆಯ ವಿಡಿಯೋ ಚಿತ್ರೀಕರಣ ಮಾಡುವುದರ ಕುರಿತಂತೆ ಎಲ್ಲಾ ರಾಜ್ಯಗಳ ಮುಖ್ಯಮಂತ್ರಿಗಳಿಗೆ ಬರೆಯಲಾಗಿರುವ ಪತ್ರ

ನ್ಯಾಯಮೂರ್ತಿ ರಂಗನಾಥ ಮಿಶ್ರ
ಅಧ್ಯಕ್ಷರು ಆಗಸ್ಟ್ 10, 1995

ನನ್ನ ಆತ್ಮೀಯ ಮುಖ್ಯಮಂತ್ರಿಗಳಿಗೆ,

ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು 1993ನೇ ಅಕ್ಟೋಬರ್ ತಿಂಗಳಿನಲ್ಲಿ ಪರ್ಯಾಲೋಚನಾ ಸಭೆಯೊಂದನ್ನು ನಡೆಸಿತ್ತು. ಇದಾದರ ಕೂಡಲೇ ಆಯೋಗವು ಜಿಲ್ಲಾ ಮಟ್ಟದ ಕಾನೂನು ಸುವ್ಯವಸ್ಥೆಯ ಸಂಸ್ಥೆಗಳ ಸಭೆ ಕರೆದು ಬಂಧನದಲ್ಲಿ ಸಂಭವಿಸಿರುವ ಸಾವು ಹಾಗೂ ಅತ್ಯಾಚಾರದ ಪ್ರಕರಣಗಳನ್ನು ಅವು ಸಂಭವಿಸಿದ 24 ಗಂಟೆಗಳೊಳಗಾಗಿ ವರದಿ ಮಾಡುವಂತೆ ಸೂಚಿಸಿತ್ತು. ಅಂದಿನಿಂದ ಇಂತಹ ಪ್ರಕರಣಗಳ ಸಾಮಾನ್ಯ ವರದಿಗಳು ಅಧಿಕೃತ ಜಿಲ್ಲಾ ಸಂಸ್ಥೆಗಳ ಮುಖಾಂತರ ಆಯೋಗಕ್ಕೆ ಬರತೊಡಗಿವೆ. ಪೊಲೀಸ್ ಬಂಧನಗಳಲ್ಲಿ ಅಪ್‌ಗಳಲ್ಲಿ ಮತ್ತು ಕಾರಾಗೃಹಗಳಲ್ಲಿ ಬಂಧಿತರು ಸಾವನ್ನಪ್ಪುತ್ತಿರುವ ಪ್ರಕರಣಗಳ ಸಂಖ್ಯೆ ಹೆಚ್ಚುತ್ತಿರುವುದು ಆಯೋಗವನ್ನು ತಲ್ಲಣಗೊಳಿಸಿದೆ. ಬಂಧಿತರ ಸಾವಿನ ಈ ಎಲ್ಲ ಪ್ರಕರಣಗಳ ವರದಿಯನ್ನು ಆಯೋಗವು ಪರಿಶೀಲಿಸಲಾಗಿ ಬಹುತೇಕ ಪ್ರಕರಣಗಳಲ್ಲಿ ಶವಪರೀಕ್ಷೆಯನ್ನು ಸಮರ್ಪಕವಾಗಿ ನಡೆಸಲಾಗಿಲ್ಲ ಎಂಬುದು ಹೆಚ್ಚಾಗಿ ಕಂಡುಬರುತ್ತಿದೆ. ಸಾಮಾನ್ಯವಾಗಿ ಈ ವರದಿಗಳಲ್ಲಿ ವಿವರಗಳು ಅನಿಶ್ಚಿತವೆಂಬಂತೆ ಚಿತ್ರಿತವಾಗಿದ್ದು, ಸಾವಿಗೆ ಕಾರಣವೇನಿರಬಹುದು ಎಂದು ಒಂದು ತೀರ್ಮಾನಕ್ಕೆ ಬರಲು ಇದು ಸಹಾಯಕವಾಗಿಲ್ಲ. ಸತ್ಯವನ್ನು ಮರೆಮಾಚುವ ಒಂದು ವ್ಯವಸ್ಥಿತ ಪ್ರಯತ್ನ ಇದಾಗಿದ್ದು, ಈ ವರದಿಗಳೆಲ್ಲ ಬರೀ ಪೋಲೀಸರ ಮಾತುಗಳಾಗಿವೆ ಎಂಬ ಅಭಿಮತವನ್ನು ಆಯೋಗವು ತಳೆಯುವಂತಾಗಿದೆ.

ಶವಪರೀಕ್ಷೆಯ ವರದಿ ಒಂದು ಅತ್ಯಮೂಲ್ಯವಾದ ದಾಖಲೆಯಾಗಿದ್ದು ಮರಣಕ್ಕೆ ಕಾರಣವೇನು ಎಂಬುದರ ಕುರಿತು ಒಂದು ತೀರ್ಮಾನಕ್ಕೆ ಬರಲು ಇದನ್ನು ಒಂದು ಪ್ರಮುಖ ದಾಖಲೆಯೆಂದು ಪರಿಗಣಿಸಲಾಗುತ್ತದೆ.

ಮೊಟ್ಟಮೊದಲನೆಯದಾಗಿ, ಸತ್ಯಾಂಶಗಳನ್ನು ತಿರುಚುವಲ್ಲಿ ಸ್ಥಳೀಯ ವೈದ್ಯರು ಪೋಲೀಸರ ಒತ್ತಡಗಳಿಗೆ ಬಲಿಯಾಗಿದ್ದಾರೆಂಬ ಅಭಿಪ್ರಾಯವನ್ನು ಆಯೋಗ ಹೊಂದಿದೆ. ಪೋಲೀಸರ ವಶದಲ್ಲಿದ್ದಾಗ ಸಂಭವಿಸಿದ ಹಾಗೂ ಕಾರಾಗೃಹದಲ್ಲಿ ಸಂಭವಿಸಿದ ಸಾವುಗಳ ಶವಪರೀಕ್ಷೆಯ ವಿಡಿಯೋ ಚಿತ್ರೀಕರಣ ನಡೆಸಿ, ಅದರ ಕೆಸೆಟ್‌ಗಳನ್ನು ಶವಪರೀಕ್ಷೆಯ ವರದಿಯೊಂದಿಗೆ ಆಯೋಗಕ್ಕೆ ರವಾನಿಸಬೇಕೆಂದು ಆಯೋಗವು ಇಚ್ಛಿಸುತ್ತದೆ. ವಿಡಿಯೋ ಚಿತ್ರೀಕರಣ ನಡೆಸುವುದರಿಂದ ಹೆಚ್ಚುವರಿ ವೆಚ್ಚ ತಗಲುವುದೆಂಬ ಅರಿವು ಆಯೋಗಕ್ಕಿದೆ. ಆದರೆ ಮಾನವನ ಬದುಕು ವಿಡಿಯೋ ಚಿತ್ರೀಕರಣಕ್ಕಿಂತಲೂ ಅಧಿಕ ಬೆಲೆಯುಳ್ಳದ್ದೆಂಬುದನ್ನು ನೀವು ಕೂಡ ಸಮ್ಮತಿಸುವಿರಿ ಮಾತ್ರವಲ್ಲದೆ ಇಂತಹ ಸಂದರ್ಭಗಳು ಒಂದು ಪರಿಮಿತಿಯಲ್ಲಿರುತ್ತವೆ ಎಂದು ನಾವು ಭಾವಿಸುತ್ತೇವೆ.

ಅಕ್ಟೋಬರ್ 1, 1995ರಿಂದ ಜಾರಿಗೆ ಬರುವಂತೆ ತಾವು ಈ ಕೂಡಲೇ ತಮ್ಮ ತಮ್ಮ ರಾಜ್ಯಗಳ ಪೊಲೀಸ್ ವರಿಷ್ಠಾಧಿಕಾರಿಗಳನ್ನು ಶವ ಪರೀಕ್ಷೆಯ ವಿಡಿಯೋ ಚಿತ್ರೀಕರಣ ಮಾಡಿಸುವಂತೆ ಎಚ್ಚರಿಸಿದಲ್ಲಿ ನಾವು ಸಂತೋಷಿಸುತ್ತೇವೆ.

ಮೂರು ವಾರಗಳೊಳಗಾಗಿ ತಮ್ಮ ಪ್ರತಿಕ್ರಿಯೆಯನ್ನು ನಿರೀಕ್ಷಿಸುತ್ತೇವೆ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ,
ಸಹಿ/-
(ರಂಗನಾಥ್ ಮಿಶ್ರ)

ರಿಗೆ,
ಎಲ್ಲಾ ರಾಜ್ಯಗಳ ಮುಖ್ಯ ಮಂತ್ರಿಗಳಿಗೆ, ಪಾಂಡಿಚೆರಿ ಮತ್ತು ರಾಜಧಾನಿ ಪ್ರದೇಶವಾದ ದೆಹಲಿ/ ರಾಷ್ಟ್ರಪತಿ ಆಡಳಿತದಲ್ಲಿರುವ ರಾಜ್ಯಗಳ ರಾಜ್ಯಪಾಲರುಗಳಿಗೆ.

## ಮಾದರಿ ಶವಪರೀಕ್ಷೆಯ ನಮೂನೆ ಮತ್ತು ತನಿಖೆಗಾಗಿ ಹೆಚ್ಚುವರಿ ಕಾರ್ಯವಿಧಾನಗಳನ್ನು ಅನುಸರಿಸುವಂತೆ ಕೋರಿ ಎಲ್ಲ ರಾಜ್ಯಗಳ/ಕೇಂದ್ರ ಶಾಸಿತ ಪ್ರದೇಶಗಳ ಮುಖ್ಯಮಂತ್ರಿಗಳಿಗೆ/ಆಡಳಿತಾಧಿಕಾರಿಗಳಿಗೆ ಬರೆಯಲಾಗಿರುವ ಪತ್ರ

| | |
|---|---|
| ನ್ಯಾಯಮೂರ್ತಿ ಎಂ. ಎನ್. ವೆಂಕಟಾಚಲಯ್ಯ | ಸಂ.ಎನ್ಎಚ್ಆರ್‌ಸಿ/ಐಡಿ/ಪಿಎಮ್/96/57 |
| ಅಧ್ಯಕ್ಷರು | ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ |
| (ಭಾರತದ ಮಾಜಿ ಮುಖ್ಯ ನ್ಯಾಯಮೂರ್ತಿಗಳು) | ಮಾರ್ಚ್ 27, 1997 |

ಆತ್ಮೀಯ ಮುಖ್ಯಮಂತ್ರಿಗಳಿಗೆ,

ಬಂಧನದಲ್ಲಿದ್ದಾಗ ಸಂಭವಿಸಿದ ಸಾವಿನ ಪ್ರಕರಣಗಳನ್ನು ಕೈಗೆತ್ತಿಕೊಳ್ಳಲು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ಕೈಗೊಂಡಿರುವ ಕೆಲವು ಕ್ರಮಗಳ ಬಗೆಗೆ ಈ ಮೂಲಕ ತಮ್ಮ ಗಮನವನ್ನು ಸೆಳೆಯಬಯಸುತ್ತೇವೆ. 1993ರ ಡಿಸೆಂಬರ್ 14ರಂದು ಆಯೋಗವು ಎಲ್ಲಾ ಜಿಲ್ಲೆಗಳ ಮ್ಯಾಜಿಸ್ಟ್ರೇಟರುಗಳಿಗೆ ಸಾಮಾನ್ಯ ಸುತ್ತೋಲೆಯೊಂದನ್ನು ರವಾನಿಸಿ ಬಂಧನದಲ್ಲಿದ್ದಾಗ ಸಂಭವಿಸಿದ ಸಾವು ಹಾಗೂ ಅತ್ಯಾಚಾರಗಳ ಪ್ರಕರಣವನ್ನು ಘಟನೆ ಸಂಭವಿಸಿದ 24 ಗಂಟೆಗಳೊಳಗಾಗಿ ವರದಿ ಮಾಡುವಂತೆ ಸೂಚಿಸಿದೆ. ಶವಪರೀಕ್ಷೆಯನ್ನು ನಡೆಸುವ ವೈದ್ಯರುಗಳು ಪೋಲೀಸರ/ಕಾರಾಗೃಹದ ಅಧಿಕಾರಿಗಳ ಪ್ರಭಾವ/ಒತ್ತಡಗಳಿಗೆ ಮಣಿದು ಶವಪರೀಕ್ಷೆ ನಡೆಸಿರುವ ಹಲವು ಉದಾಹರಣೆಗಳು ಆಯೋಗದ ಗಮನಕ್ಕೆ ಬಂದಿರುತ್ತದೆ. ಕೆಲವು ಪ್ರಕರಣಗಳಲ್ಲಿ ಶವಪರೀಕ್ಷೆಯನ್ನು ಸಮರ್ಪಕವಾಗಿ ನಡೆಸದೇ ಇರುವುದು ಕಂಡುಬಂದಿರುತ್ತದೆ. ಅವುಗಳನ್ನು ಬರೆಯುವುದರಲ್ಲಿ ಹಾಗೂ ಮಾಹಿತಿ ಸಂಗ್ರಹ ಮಾಡುವುದರಲ್ಲಿ ಅತಿಯಾದ ವಿಳಂಬ ಕಂಡುಬಂದಿರುತ್ತದೆ. ಬಂಧನದಲ್ಲಿ ಸಂಭವಿಸುವ ದೌರ್ಜನ್ಯದ ಪ್ರಕರಣಗಳಲ್ಲಿ ಹೊರಗಿನ ಸ್ವತಂತ್ರ ಸಾಕ್ಷ್ಯಾಧಾರಗಳಾವುವೂ ಇಲ್ಲದಿರುವುದರಿಂದಾಗಿ ಈ ಪ್ರಕರಣಗಳ ಭವಿಷ್ಯವು ಪರಿಶೀಲಿಸಿ ದಾಖಲಿಸಲಾಗಿರುವ ಮಾಹಿತಿಗಳು ಹಾಗೂ ಶವಪರೀಕ್ಷೆಯ ವರದಿಯಲ್ಲಿ ವೈದ್ಯರು ನೀಡಿರುವ ಅಭಿಪ್ರಾಯಗಳನ್ನಷ್ಟೇ ಅವಲಂಬಿಸಿರುತ್ತದೆ. ಶವಪರೀಕ್ಷೆಯನ್ನು ಸಮರ್ಪಕವಾದ ರೀತಿಯಲ್ಲಿ ನಡೆಸದಿದ್ದಲ್ಲಿ ಪಟ್ಟಭದ್ರ ಹಿತಾಸಕ್ತಿಗಳ ವಿರುದ್ಧ ದಾವೆ ಹೂಡುವುದು ಸಾಧ್ಯವಾಗದೆ ಹೋಗುತ್ತದೆ. ಇದರಿಂದ ಅಪರಾಧಿಗಳ ಪತ್ತೆ ಸಾಧ್ಯವಾಗದೆ ನ್ಯಾಯದ ವಿಡಂಬನೆಯಾಗುತ್ತದೆ ಮಾತ್ರವಲ್ಲದೆ ಬಂಧನದಲ್ಲಿದ್ದಾಗ ನಡೆಯುವ ಗಂಭೀರವಾದ ಮಾನವ ಹಕ್ಕುಗಳ ಉಲ್ಲಂಘನೆಯು ದಂಡನೆಯಿಂದ ವಿನಾಯಿತಿ ಪಡೆದುಕೊಂಡುಬಿಡುವಂತಾಗುತ್ತದೆ.

ಇಂತಹ ಸುಳ್ಳು ನಿರೂಪಣೆಗಳನ್ನು ತಡೆಯುವ ದೃಷ್ಟಿಯಿಂದ, ಶವಪರೀಕ್ಷೆಯ ವಿಡಿಯೋ ಚಿತ್ರೀಕರಣ ನಡೆಸಿ ಅದರ ಕೆಸೆಟ್‌ಗಳನ್ನು ಆಯೋಗಕ್ಕೆ ಕಳುಹಿಸಿ ಕೊಡುವಂತೆ ಆಯೋಗವು ಎಲ್ಲ ರಾಜ್ಯಗಳಿಗೆ ಶಿಫಾರಸು ಮಾಡಿದೆ.

ಪ್ರಸ್ತುತ ವಿವಿಧ ರಾಜ್ಯಗಳಲ್ಲಿ ಬಳಕೆಯಲ್ಲಿರುವ ಶವಪರೀಕ್ಷೆಯ ವರದಿಯ ನಮೂನೆಗಳು ವಿಸ್ತೃತವಾದವುಗಳಲ್ಲ. ಆದ್ದರಿಂದ, ಅವು ಉದ್ದೇಶವನ್ನು ಪೂರೈಸುವುದಿಲ್ಲ ಮಾತ್ರವಲ್ಲದೆ ಸಂದೇಹಗಳಿಗೆ ಮತ್ತು ಯುಕ್ತಿಯಿಂದ ನಿರ್ವಹಣೆ ಮಾಡುವುದಕ್ಕೆ ಆಸ್ಪದ ನೀಡುತ್ತದೆ. ಆದ್ದರಿಂದ ಆಯೋಗವು

ಶವಪರೀಕ್ಷೆಯ ನಮೂನೆಯನ್ನು ತಿದ್ದುಪಡಿ ಮಾಡುವುದರ ಮೂಲಕ ಅದರಲ್ಲಿರುವ ಕೊರತೆಗಳನ್ನು ಸರಿಪಡಿಸಲು ಹಾಗೂ ಅದನ್ನು ಮತ್ತಷ್ಟು ತೀಕ್ಷ್ಣ ಹಾಗೂ ಉದ್ದೇಶಕ್ಕೆ ಪೂರಕವಾಗುವಂತೆ ಮಾಡಲು ತೀರ್ಮಾನಿಸಿದೆ.

ರಾಜ್ಯಗಳ ನಿಲುವೇನೆಂಬುದನ್ನು ಖಚಿತಪಡಿಸಿಕೊಂಡ ನಂತರ ಮತ್ತು ಈ ಕ್ಷೇತ್ರದ ಪರಿಣತರೊಂದಿಗೆ ಸಮಾಲೋಚನೆ ನಡೆಸಿದ ನಂತರ, ವಿಶ್ವ ಸಂಸ್ಥೆಯ ಮಾದರಿ ಶವಪರೀಕ್ಷೆಯ ಮೂಲ ಕರಡುಪ್ರತಿಯನ್ನು, ಸಂಪೂರ್ಣವಾಗಿ ಒಳಗೊಳಿಸಿಕೊಳ್ಳಲಾಗಿಲ್ಲವಾದರು, ಗಮನದಲ್ಲಿರಿಸಿಕೊಂಡು ಮಾದರಿ ಶವಪರೀಕ್ಷೆಯ ನಮೂನೆಯೊಂದನ್ನು ಸಿದ್ಧಪಡಿಸಲಾಗಿದೆ. ಅಡಕ - 1.

ಇದಕ್ಕೆ ಸಂಬಂಧಿಸಿದಂತೆ, ತನಿಖೆಯನ್ನು ಕೈಗೊಳ್ಳುವುದಕ್ಕೆ ಸಂಬಂಧಿಸಿದಂತೆ ಕೆಲವು ಸಾಂದರ್ಭಿಕ ಸುಧಾರಣೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ ಎಂದು ನಮಗೆ ಅನಿಸಿದೆ. "ಸಾವು ಸಂಭವಿಸಿ ಎಷ್ಟು ಸಮಯವಾಯಿತು" ಅಥವಾ "ಸಾವು ಸಂಭವಿಸಿದ ವೇಳೆ" ದೇಹದ ಉಷ್ಣತೆಯಲ್ಲಿ ಬದಲಾವಣೆಗಳಾದುದರ ಖಚಿತ ವಿವರ, ಸ್ನಾಯುಗಳಲ್ಲಿ ಬಿಗಿತ ಉಂಟಾಗಲು ತೊಡಗಿದ ವಿವರ ಇವುಗಳನ್ನು ಪ್ರಥಮ ಪರೀಕ್ಷೆಯ ಸಂದರ್ಭದಲ್ಲಿ ಅಲ್ಲೇ ಸಮರ್ಪಕವಾಗಿ ಪರಿಶೀಲಿಸಿ ತಿಳಿದುಕೊಳ್ಳುವುದು ಅತ್ಯಾವಶ್ಯಕ. ಸುಲಭವಾಗಿ ಅರ್ಥೈಸಿಕೊಳ್ಳಲು ಹಾಗೂ ಸುಲಭವಾಗಿ ಜಾರಿಗೊಳಿಸಲು ಸಾಧ್ಯವಿರುವಂತಹ ಕೆಲವು ಕ್ರಮಗಳನ್ನು ಅನುಸರಿಸುವುದರ ಮುಖಾಂತರ ಇವನ್ನೆಲ್ಲ ಅನುಕೂಲಕರವಾಗಿ ಮಾಡಬಹುದು. ತನಿಖಾಧಿಕಾರಿಗಳು ಪಾಲಿಸಬೇಕಾದ ಕ್ರಮಗಳ ವಿವರವನ್ನು ಈ ಪತ್ರದೊಂದಿಗಿನ ಅಡಕ-IIರಲ್ಲಿ ಕೊಡಲಾಗಿದೆ. ತನಿಖೆಯ ಕಾರ್ಯವಿಧಾನಕ್ಕೆ ಸಂಬಂಧಿಸಿದಂತೆ ಇದೊಂದು ಸಣ್ಣ ಆದರೆ ಬಹಳ ಪ್ರಮುಖವಾದ ಸೇರ್ಪಡೆಯಾಗಿದೆ.

ತಮ್ಮ ಸರಕಾರವು ಮಾದರಿ ಶವಪರೀಕ್ಷೆಯ ನಮೂನೆ (ಅಡಕ-I) ಮತ್ತು ತನಿಖೆಯ ಅಡಕ - IIರಲ್ಲಿ ಸೂಚಿಸಲಾಗಿರುವ ಹೆಚ್ಚುವರಿ ಕಾರ್ಯವಿಧಾನಗಳನ್ನು ತಮ್ಮ ರಾಜ್ಯಗಳಲ್ಲಿ ಈ ಕೂಡಲೇ ಜಾರಿಗೆ ಬರುವಂತೆ ಆದೇಶಿಸಬೇಕೆಂದು ಆಯೋಗವು ಶಿಫಾರಸ್ಸು ಮಾಡುತ್ತದೆ.

ತಮ್ಮಿಂದ ವಿಚಾರಪರವಾದ ಮತ್ತು ಅನುಕೂಲಕರವಾದ ಪ್ರತಿಕ್ರಿಯೆಯನ್ನು ನಿರೀಕ್ಷಿಸುತ್ತೇವೆ.

ತಮ್ಮ ವಿಶ್ವಾಸಿ

ಸಹಿ/-

(ಎಂ. ಎನ್. ವೆಂಕಟಾಚಲಯ್ಯ)

ರಿಗೆ,

ಮುಖ್ಯಮಂತ್ರಿಗಳು, ಎಲ್ಲ ರಾಜ್ಯಗಳು/ ಕೇಂದ್ರ ಶಾಸಿತ ಪ್ರದೇಶಗಳು.

# ಮಾದರಿ ಶವಪರೀಕ್ಷೆ ವರದಿ ನಮೂನೆ

## (ಅನುಬಂಧ 'ಎ' ಯಲ್ಲಿರುವ ಆದೇಶಗಳನ್ನು ಗಮನವಿಟ್ಟು ಓದಿರಿ)

ಸಂಸ್ಥೆಯ ಹೆಸರು ______________________________

ಶವಪರೀಕ್ಷೆ ವರದಿ ಸಂ. ______________ ದಿನಾಂಕ ______________

ಶವಪರೀಕ್ಷೆ ನಡೆಸಿದ ವೈದ್ಯರು ಡಾ. ______________________________

ಶವ ಮತ್ತು ಶವಪರೀಕ್ಷೆಯ ತನಿಖೆಯ ಕಾಗದಪತ್ರಗಳನ್ನು

ಪಡೆದುಕೊಂಡ ದಿನಾಂಕ ಮತ್ತು ಸಮಯ ______________________________

ಶವಪರೀಕ್ಷೆಯನ್ನು ಪ್ರಾರಂಭಿಸಿದ ದಿನಾಂಕ ಮತ್ತು ಸಮಯ ______________________________

ಶವಪರೀಕ್ಷೆ ಮುಗಿದ ಸಮಯ ______________________________

ತನಿಖೆಗಾಗಿ ಶವವನ್ನು ಪರಿಶೀಲಿಸಿದ ದಿನಾಂಕ

ಮತ್ತು ಸಮಯ (ತನಿಖಾ ವರದಿಯ ಪ್ರಕಾರ) ______________________________

ವ್ಯಕ್ತಿಯ ಹೆಸರು ಮತ್ತು ವಿಳಾಸ ______________________________

ಶವಪರೀಕ್ಷೆಯ ವೀಡಿಯೋ ಚಿತ್ರೀಕರಣ ______________________________

ಟಿಪ್ಪಣಿ: ದಿನಾಂಕ ನಮೂದಿಸಿ, ಸಹಿ ಮತ್ತು ಮೊಹರು ಹಾಕಿದ ವೀಡಿಯೋ ಟೇಪನ್ನು ರಾಷ್ಟ್ರೀಯ ಮಾನವ ಹಕ್ಕು ಆಯೋಗ, ಸರ್ದಾರ್ ಪಟೇಲ್ ಭವನ, ಸಂಸದ್ ಮಾರ್ಗ, ನವದೆಹಲಿ ಈ ವಿಳಾಸಕ್ಕೆ ಕಳುಹಿಸಬೇಕು.

---

**ಪ್ರಕರಣದ ವಿವರಗಳು**

1. (ಎ) ಮೃತನ ಹೆಸರು
   ಕಾರಾಗೃಹ ಅಥವಾ ಪೊಲೀಸ್ ದಾಖಲೆಗಳಲ್ಲಿ ನಮೂದಿಸಲಾಗಿರುವಂತೆ ______________

   (ಬಿ) ರ ಮಗ/ಮಗಳು/ಹೆಂಡತಿ ______________________________

   (ಸಿ) ವಿಳಾಸ: ______________________________

2. ವಯಸ್ಸು (ಅಂದಾಜು) : ______________ ವರ್ಷಗಳು ಲಿಂಗ:ಪುರುಷ/ಸ್ತ್ರೀ

3. ದೇಹವನ್ನು ತಂದವರು (ಇಲಾಖೆಯಲ್ಲಿ ಸದರಿ ಪೊಲೀಸ್ ಉದ್ಯೋಗಸ್ಥರ ಸ್ಥಾನ)
   ಪೊಲೀಸ್ ಠಾಣೆಯ

   (i) ______________________________

   (ii) ______________________________

4. ದೇಹವನ್ನು ಗುರುತಿಸಿದವರು (ಸಂಬಂಧಿಕರ/ಪರಿಚಿತ ವ್ಯಕ್ತಿಗಳ ಹೆಸರುಗಳು ಮತ್ತು ವಿಳಾಸಗಳು)

(i) ______________________________

(ii) ______________________________

**ಮೃತದೇಹವನ್ನು ಆಸ್ಪತ್ರೆಯಿಂದ ತಂದಿದ್ದಲ್ಲಿ (ಆಸ್ಪತ್ರೆಯ ದಾಖಲೆಗಳ ಪ್ರಕಾರ ವಿವರಗಳು)**

ಆಸ್ಪತ್ರೆಗೆ ದಾಖಲಾದ ದಿನಾಂಕ ಮತ್ತು ಸಮಯ ______________________________

ಆಸ್ಪತ್ರೆಯಲ್ಲಿ ಮೃತಪಟ್ಟ ದಿನಾಂಕ ಮತ್ತು ಸಮಯ ______________________________

ಆಸ್ಪತ್ರೆಯ ಕೇಂದ್ರೀಯ ನೋಂದಾವಣಾ ಸಂಖ್ಯೆ ______________________________

**ಅವಲೋಕನದ ಪಟ್ಟಿ**

(ಎ) **ಸಾಮಾನ್ಯ**

(1) ಎತ್ತರ ____________ ಸೆಂ.ಮೀ. (2) ತೂಕ ____________ ಕೆ.ಜಿ.

(3) ಮೈಕಟ್ಟು - (ಎ) ತೆಳು/ಮಧ್ಯಮ/ಸ್ಥೂಲ

(ಬಿ) ದೃಢಕಾಯ/ಸಾಮಾನ್ಯ ಮೈಕಟ್ಟು/ಅತಿ ಸಾಮಾನ್ಯ ಮೈಕಟ್ಟು/ ಕೃಶದೇಹ

4. ಗುರುತಿನ ಲಕ್ಷಣಗಳು (ಗುರುತಿಸಲ್ಪಡದ ಶವವಾಗಿದ್ದಲ್ಲಿ)

(i) ______________________________

(ii) ______________________________

(iii) ವೈದ್ಯರಿಂದ ಬೆರಳಚ್ಚನ್ನು ಪ್ರತ್ಯೇಕ ಹಾಳೆಯೊಂದರಲ್ಲಿ ತೆಗೆಸಿ ಅಡಕಗೊಳಿಸಿರಬೇಕು

(5) ಧರಿಸಿದ್ದ ಬಟ್ಟೆಗಳ ವಿವರ - ಪ್ರಮುಖ ಲಕ್ಷಣಗಳು:

(6) ಶವಪರೀಕ್ಷೆಯಲ್ಲಿ ಕಂಡು ಬಂದ ಬದಲಾವಣೆಗಳು:

(ಎ) ತನಿಖೆಯ ಸಂದರ್ಭದಲ್ಲಿ ಕಂಡುಬಂದಂತೆ

- ಸ್ನಾಯುಗಳು ಬಿಗಿಯಲು ತೊಡಗಿತ್ತೇ ______________________________
- ಉಷ್ಣಾಂಶ (ಗುದನಾಳದಲ್ಲಿ) ______________________________
- ಇನ್ನಿತರ ______________________________

(ಬಿ) ಶವಪರೀಕ್ಷೆಯ ಸಂದರ್ಭದಲ್ಲಿ ಕಂಡುಬಂದವುಗಳು -

(7) (ಎ) ಸಾಮಾನ್ಯ ಬಾಹ್ಯ ತೋರಿಕೆಗಳು -

(ಬಿ) ಕಣ್ಣುಗಳ ಸ್ಥಿತಿ

(ಸಿ) ಸ್ವಾಭಾವಿಕ ರಂಧ್ರಗಳಲ್ಲಿ

(ಬಿ) **ಮೈಮೇಲಿನ ಗಾಯಗಳು:**

(ಪ್ರತಿಯೊಂದು ಗಾಯದ ಬಗೆ, ಆಕಾರ, ಉದ್ದ x ಅಗಲ ಮತ್ತು ಆಳ ಹಾಗೂ ದೇಹದ ಪ್ರಮುಖ ಭಾಗಗಳೊಂದಿಗಿನ ಅವುಗಳ ಸಂಬಂಧವನ್ನು ಉಲ್ಲೇಖಿಸಿ. ಹೊಸಗಾಯಗಳು ಯಾವುವು ಹಳೆಯ ಗಾಯಗಳು ಯಾವುವು ಹಾಗೂ ಅವುಗಳ ಅವಧಿಯನ್ನು ಸೂಚಿಸಿ.)

---

ಸೂಚನೆಗಳು:

(i) ಗಾಯಗಳಿಗೆ ಕ್ರಮ ಸಂಖ್ಯೆಯನ್ನು ನೀಡಿ ಮತ್ತು ಲಗತ್ತಿಸಲಾಗಿರುವ ಚಿತ್ರಗಳ ಮೇಲೆ ಗುರುತು ಮಾಡಿರಿ.

(ii) ಇರಿತದ ಗಾಯಗಳಾಗಿದ್ದಲ್ಲಿ ಇರಿತದ ಕೋನ, ಅಂಚು ಮತ್ತು ದೇಹದ ಒಳಗೆ ಯಾವ ದಿಸೆಯಲ್ಲಿ ತಿವಿಯಲಾಗಿದೆ ಎಂಬುದನ್ನು ನಮೂದಿಸಿ.

(iii) ಗುಂಡೇಟಿನಿಂದಾದ ಗಾಯಗಳಾಗಿದ್ದಲ್ಲಿ ಗುಂಡೇಟಿನ ಪರಿಣಾಮಗಳನ್ನು ನಮೂದಿಸಿ.

**(ಸಿ) ದೇಹದ ಒಳಭಾಗದ ಪರೀಕ್ಷೆ**

**1. ತಲೆ**

(ಎ) ತಲೆಯ ನೆತ್ತಿಯ ಚರ್ಮ ಹಾಗೂ ಕೂದಲ ಬುಡದ ಭಾಗಗಳಲ್ಲಿ

(ಬಿ) ತಲೆ ಬುರುಡೆ (ಅಲ್ಲಿನ ಲಕ್ಷಣಗಳನ್ನು ಗುರುತಿಸಿ ಮತ್ತು ಅವನ್ನು ಲಗತ್ತಿಸಲಾಗಿರುವ ಚಿತ್ರದ ಮೇಲೆ ಗುರುತು ಮಾಡಿ)

(ಸಿ) ಮಿದುಳು, ಮಿದುಳಿನ ಆವರಣ ಮತ್ತು ಮಿದುಳಿನ ನರಗಳಲ್ಲಿ (ರಕ್ತ ಸ್ರಾವ ಮತ್ತು ರಕ್ತ ಸ್ರಾವದ ಸ್ಥಳ, ಅಸಹಜವಾದ ವಾಸನೆ ಇತ್ಯಾದಿಗಳನ್ನು ಟಿಪ್ಪಣಿ ಮಾಡಿ)

(ಡಿ) ಮಿದುಳಿನಲ್ಲಿ ಕಂಡುಬಂದ ಅಂಶಗಳು ಮತ್ತು ಅದರ ತೂಕ (ತೂಕ ಗ್ರಾಂ)

(ಇ) ಕಣ್ಣು, ಮೂಗು ಮತ್ತು ಕಿವಿಯ ಪೊಳ್ಳುಭಾಗಗಳಲ್ಲಿ - ಕಂಡುಬಂದಿರುವ ಅಂಶಗಳು

**2. ಕತ್ತು**

- ಬಾಯಿ, ನಾಲಿಗೆ ಮತ್ತು ಕಂಠನಾಳ
- ಕಂಠನಾಳಕ್ಕೆ ಮತ್ತು ಧ್ವನಿಯ ರಜ್ಜುವಿಗೆ ಸಂಬಂಧಿಸಿದಂತೆ
- ಕತ್ತಿನ ಜೀವಕೋಶಗಳ ಸ್ಥಿತಿ
- ಥೈರಾಯ್ಡ್ ಮತ್ತು ಇತರ ಮೃದು ಎಲುಬುಗಳ ಸ್ಥಿತಿ
- ಶ್ವಾಸನಾಳ

**3. ಎದೆ**

- ಪಕ್ಕೆಲುಬುಗಳು ಮತ್ತು ಎದೆಯ ಗೂಡು
- ಅನ್ನನಾಳ
- ಶ್ವಾಸನಾಳ

- ಶ್ವಾಸನಾಳ ಮತ್ತು ಶ್ವಾಸನಳಿಕೆಯ ಕವಲುಗಳು
- ಪಕ್ಕೆಯ ಪೊಳ್ಳುಭಾಗಗಳು - ಬಲ -

- ಎಡ -

ಪುಪ್ಪುಸದಲ್ಲಿ ಕಂಡುಬಂದ ಅಂಶಗಳು ಮತ್ತು ತೂಕ ಬಲ ________ ಗ್ರಾಂಗಳು ಮತ್ತು ಎಡ ________ ಗ್ರಾಂಗಳು

- ಪೆರಿಕಾರ್ಡಿಯಲ್ ಚೀಲ
- ಎದೆಯ ಭಾಗ ಮತ್ತು ತೂಕ
- ದೊಡ್ಡ ರಕ್ತನಾಳಗಳು

**4. ಉದರದ ಭಾಗ**

- ಹೊಟ್ಟೆಯ ಗೋಡೆಯ ಭಾಗ
- ಕರುಳನ್ನು ಆವರಿಸಿರುವ ತ್ವಚಂ ಮತ್ತು ಕರುಳನ್ನು ಆವರಿಸಿರುವ ಪೊರೆಯ ಭಾಗ
- ಹೊಟ್ಟೆ ( ಗೋಡೆಯ ಸ್ಥಿತಿ, ಇದ್ದ ವಸ್ತುಗಳು ಮತ್ತು ವಾಸನೆ) (ತೂಕ ________ ಗ್ರಾಂ)
- ಸಣ್ಣ ಕರುಳುಗಳು ಕರುಳು ಬಾಲ ಸೇರಿದಂತೆ
- ದೊಡ್ಡ ಕರುಳುಗಳು ಮತ್ತು ನಡುವಿನಲ್ಲಿರುವ ರಕ್ತನಾಳಗಳು
- ಪಿತ್ತಕೋಶವನ್ನೊಳಗೊಂಡಂತೆ ಪಿತ್ತ ಜನಕಾಂಗ (ತೂಕ ________ ಗ್ರಾಂ)
- ಮೇದೋಜೀರಕ ಗ್ರಂಥಿ
- ಮೂತ್ರ ಜನಕಾಂಗಗಳಲ್ಲಿ ಕಂಡುಬಂದಿರುವ ಅಂಶಗಳು ಮತ್ತು ತೂಕ
- ಬಲ ________ ಗ್ರಾಂ ಎಡ________ ಗ್ರಾಂ
- ಮೂತ್ರ ಕೋಶ ಮತ್ತು ಮೂತ್ರ ದ್ವಾರ
- ನಡುವಿನ ಪೊಳ್ಳುಭಾಗದ ಜೀವಕೋಶಗಳು
- ನಡುವಿನ ಮೂಳೆಗಳು
- ಜನನಾಂಗಗಳು (ಯೋನಿ, ವೃಷಣಗಳ ಸ್ಥಿತಿ, ಹೊರಗಿನ ವಸ್ತುಗಳೇನಾದರೂ ಇದ್ದವೇ, ಭ್ರೂಣ ಇತ್ತೇ, ವೀರ್ಯ ಅಥವಾ ಮತ್ತಾವುದೇ ದ್ರವ ಹಾಗೂ ಜನನಾಂಗ ಪ್ರದೇಶದ ಸುತ್ತ ಮೂಕಪೆಟ್ಟು ಅಥವಾ ಗಾಯದ ಗುರುತು ಇತ್ತೇ ಎಂಬುದನ್ನು ನಮೂದಿಸಬೇಕು)

5. ಬೆನ್ನು ಮೂಳೆ ಮತ್ತು ಬೆನ್ನುಹುರಿ (ಗುರುತಿಸಲಾಗಿರುವ ಜಾಗದಲ್ಲಿ ಕೊಯ್ಯಬೇಕು)

ಅಭಿಪ್ರಾಯ

i) ಸಾವು ಸಂಭವಿಸಿರಬಹುದಾದ ಸಮಯ (ತನಿಖೆಯ ಸಂದರ್ಭದಲ್ಲಿ ಕಂಡುಬಂದ ಅಂಶಗಳನ್ನೊಳಗೊಂಡಂತೆ ಇತರ ಎಲ್ಲಾ ಅಂಶಗಳನ್ನು ಇರಿಸಿಕೊಳ್ಳುವುದು)

ii) ಸಾವಿಗೆ ಕಾರಣ ಮತ್ತು ಸಾವಿನ ಬಗೆ - ನನ್ನ ತಿಳುವಳಿಕೆಯ ಮಟ್ಟಿಗೆ ಸಾವಿಗೆ ಕಾರಣ ಮತ್ತು ನಾನು ನಂಬುವುದೇನೆಂದರೆ:-

(ಎ) ತತ್‌ಕ್ಷಣದ ಕಾರಣ -

(ಬಿ) ಯುಕ್ತ ಕಾರಣ -

(ಸಿ) ಯಾವ್ಯಾವ ಗಾಯಗಳು ಮರಣೋತ್ತರ ಪರೀಕ್ಷೆಗಿಂತ ಮುಂಚಿನವುಗಳು ಹಾಗೂ ಯಾವ್ಯಾವ ಗಾಯಗಳು ಶವಪರೀಕ್ಷೆಯ ನಂತರ ಕಂಡುಬಂದಂತಹವುಗಳು ಹಾಗೂ ಶವಪರೀಕ್ಷೆ ಗೆ ಮುಂಚಿನ ಅವಧಿ

(ಡಿ) ಯಾವ್ಯಾವ ಕಾರಣಗಳಿಂದಾಗಿ ಗಾಯಗಳಾಗಿವೆ

(ಇ) ಸಾಮಾನ್ಯ ರೀತಿಯಲ್ಲಿ ಸಹಜ ಸಾವು ಸಂಭವಿಸಲು ಈ ಗಾಯಗಳಷ್ಟೇ (ಬಿಡಿಯಾಗಿ ಅಥವಾ ಒಟ್ಟಾಗಿ) ಸಾಕಾಗುತ್ತವೆಯೇ ಅಥವಾ ಇಲ್ಲವೇ?

iii) ಇನ್ನಿತರ

## ಸಂಗ್ರಹಿಸಿ ಸಲ್ಲಿಸಲಾದ ಮಾದರಿಗಳು (ದಯವಿಟ್ಟು ಗುರುತಿಸಿ)

ಎ) ಕರುಳು (ಹೊಟ್ಟೆ ಮತ್ತು ಹೊಟ್ಟೆಯಲ್ಲಿದ್ದವುಗಳು, ಸಣ್ಣಕರುಳು ಮತ್ತು ಅದರಲ್ಲಿದ್ದವುಗಳು, ಪಿತ್ತಜನಕಾಂಗದ ಮಾದರಿ, ಮೂತ್ರ ಜನಕಾಂಗ (ಪ್ರತಿಯೊಂದರ ಅರ್ಧಭಾಗ), ಗುಲ್ಮ, ಹತ್ತಿಯ ಚೂರಿನ ಮೇಲೆ ತೆಗೆದುಕೊಂಡ ರಕ್ತದ ಮಾದರಿ (ಒಣ), ಕರುಗಳುಗಳ ಇತರ ಭಾಗ, ಬಳಸಲಾಗಿರುವ ರಕ್ಷಕ ಸಾಧನಗಳು)

ಬಿ) ಬಟ್ಟೆಗಳು

ಸಿ) ಛಾಯಾಚಿತ್ರಗಳು (ಬಂಧನದಲ್ಲಿ ಸಂಭವಿಸಿದ ಮರಣವಾಗಿದ್ದಲ್ಲಿ ವೀ ಡಿಯೋ ಕೆಸೆಟ್), ಬೆರಳಚ್ಚು ಇತ್ಯಾದಿ.

ಡಿ) ಬಾಹ್ಯ ವಸ್ತುಗಳು (ಬುಲೆಟ್, ಗಾಯದ ಪಟ್ಟಿ ಇತ್ಯಾದಿ)

ಇ) ವಿಷಪ್ರಾಷನವಾಗಿದ್ದಲ್ಲಿ ರಕ್ಷಕ ಸಾಧನಗಳ ಮಾದರಿ

ಎಫ್) ಮುದ್ರೆಯ ಮಾದರಿ

ಜಿ) ತನಿಖೆಯ ಕಾಗದ ಪತ್ರಗಳು (ಒಟ್ಟು ಸಂಖ್ಯೆಯನ್ನು ನಮೂದಿಸಿ ಸಹಿ ಹಾಕಿ)

ಎಚ್) ಯೋನಿಸ್ರಾವ, ವೀರ್ಯ ಅಥವಾ ಇನ್ನಿತರ ಯಾವುದೇ ದ್ರವದ ಸ್ಲೈಡುಗಳು

ಶವಪರೀಕ್ಷೆಯ ಮೂಲಪ್ರತಿ, ________ ತನಿಖೆಯ ಕಾಗದ ಪತ್ರಗಳು, ಶವ, ಬಟ್ಟೆಬರೆಗಳು ಮತ್ತು ಇತರ ವಸ್ತುಗಳು (ನಮೂದಿಸಿ) ಮುದ್ರೆ ಹಾಕಿ (ಸಂಖ್ಯೆ ________) ಪೊಲೀಸ್ ಅಧಿಕಾರಿ ____________________ ಸಂಖ್ಯೆ: ____________ ಪೊಲೀಸ್ ಠಾಣೆ ____________ ಇವರಿಗೆ ಸಲ್ಲಿಸಲಾಗಿದೆ ಮತ್ತು ಪೊಲೀಸ್ ಅಧಿಕಾರಿಗಳ ಸಹಿ:

ಸಹಿ: ____________________

ವೈದ್ಯಾಧಿಕಾರಿಗಳ ಹೆಸರು: ____________

ಪದನಾಮ: ____________________

ಮೊಹರು: ____________________

## ಪೂರ್ಣ ಶರೀರ: ಪುರುಷ - ಮುಂಭಾಗ ಹಾಗೂ ಹಿಂಭಾಗದ ನೋಟ
## (ಹೊಟ್ಟೆಯ ಮತ್ತು ಬೆನ್ನಿನ)



ಹೆಸರು ______________________ ಪ್ರಕರಣ ಸಂಖ್ಯೆ ______________________

ದಿನಾಂಕ ______________________

## ಪೂರ್ಣ ಶರೀರ: ಮಹಿಳೆ - ಮುಂಭಾಗ ಹಾಗೂ ಹಿಂಭಾಗದ ನೋಟ





ಹೆಸರು ______________________ ಪ್ರಕರಣ ಸಂಖ್ಯೆ ______________________

ದಿನಾಂಕ ______________________

# ಬಂಧನದಲ್ಲಿದ್ದವರ ಅಥವಾ ಚಿತ್ರಹಿಂಸೆಗೆ ಒಳಗಾದವರ ಪ್ರಕರಣಗಳಲ್ಲಿ ಎಚ್ಚರಿಕೆಯಿಂದ ಅನುಸರಿಸಬೇಕಾದ ಕ್ರಮಗಳು

| ಚಿತ್ರಹಿಂಸೆಯ ತಂತ್ರಗಳು | ದೇಹದ ಮೇಲೆ ಕಂಡುಬಂದ ಗುರುತುಗಳು |
|---|---|
| **ಹೊಡೆಯುವುದು** | |
| 1. ಸಾಮಾನ್ಯ | ವಿಶೇಷವಾಗಿ, ದೇಹದ ಅಸಾಮಾನ್ಯ ಜಾಗಗಳಲ್ಲಿ, ವೈದ್ಯಕೀಯವಾಗಿ ಚಿಕಿತ್ಸೆ ಕೊಡಿಸದ ಗಾಯಗಳು, ಮೂಕಪೆಟ್ಟುಗಳು, ಜಜ್ಜಿದ ಗುರುತುಗಳು, ಮಾಗುತ್ತಿರುವ ವಿವಿಧ ಹಂತಗಳಲ್ಲಿರುವ ಹಲವು ಮುರಿತಗಳು |
| 2. ಪಾದಗಳ ಅಂಗಾಲುಗಳಲ್ಲಿ, ಅಥವಾ ಪಾದಗಳ ಮೂಳೆಗಳಲ್ಲಿ ಮುರಿತ | ಅಂಗಾಲುಗಳು ಹಾಗೂ ಪಾದದ ಕೀಲುಗಳ ಮೃದು ಅಂಗಾಂಶಗಳಲ್ಲಿ ರಕ್ತಸ್ರಾವ. ಶವದಲ್ಲಿ ವಿಷಾಣುಗಳಿಂದ ಕೊಳೆಯದ ಗಾಯ |
| 3. ಒಂದೇ ಬಾರಿಗೆ ಎರಡೂ ಕಿವಿಗಳ ಮೇಲೆ ಅಂಗೈಗಳಿಂದ ಅಪ್ಪಳಿಸುವುದು | ಕಿವಿ ತಮಟೆ ಛಿದ್ರಗೊಂಡಿರುವುದು ಅಥವಾ ಗಾಯವಾಗಿರುವುದು ಹಾಗೂ ಹೊರಗಿವಿಯಲ್ಲಿ ಗಾಯಗಳಾಗಿರುವುದು |
| 4. ದೇಹದ ಮೇಲ್ಭಾಗ ಆಸರೆಯಿಲ್ಲದೆ ಮೇಜಿನ ಮೇಲೊರಗಿದ ಭಂಗಿಯಲ್ಲಿ ("ಓಪರೇಟಿಂಗ್ ಟೇಬಲ್") ಹೊಟ್ಟೆಯ ಮೇಲೆ ಹೊಡೆತ | ಹೊಟ್ಟೆಯ ಮೇಲೆ ಗಾಯಗಳು. ಬೆನ್ನಿನ ಮೇಲೆ ಗಾಯಗಳು. ಹೊಟ್ಟೆಯೊಳಗೆ ಕರುಳಿನ ಪ್ರದೇಶ ಛಿದ್ರಗೊಂಡಿರುವುದು. |
| 5. ತಲೆಗೆ ಹೊಡೆಯುವುದು | ತರಚಿತ ಮೆದುಳಿನ ಕವಚ, ಗಾಯ, ತಲೆ ಬುರುಡೆ ಒಡೆದಿರುವುದು, ಬಿರುಕುಬಿಟ್ಟ ಗಾಯಗಳು, ರಕ್ತಸ್ರಾವ |
| **ನೇತು ಹಾಕುವುದು** | |
| 6. ಮುಂಗೈಗಳನ್ನು ಕಟ್ಟಿ ನೇತುಹಾಕುವುದು | ಮುಂಗೈಗಳಲ್ಲಿ ಉಜ್ಜುಗಾಯಗಳು ಅಥವಾ ಗಾಯದ ಕಲೆಗಳು. ಕೀಲುಗಳಲ್ಲಿ ಮುರಿತ. |
| 7. ತೋಳುಗಳನ್ನು ಸೇರಿಸಿ ಕಟ್ಟಿ ನೇತುಹಾಕುವುದು ಅಥವಾ ಕತ್ತನ್ನು ಕಟ್ಟಿ ನೇತುಹಾಕುವುದು | ಕಟ್ಟು ಹಾಕಿದ ಜಾಗದಲ್ಲಿ ಉಜ್ಜುಗಾಯಗಳು ಅಥವಾ ಗಾಯದ ಕಲೆಗಳು. ಕೈಗಳ ತುದಿಯಲ್ಲಿ ಎದ್ದು ಕಾಣುವಂತಹ ರಕ್ತಗಟ್ಟುವಿಕೆ. |
| 8. ಪಾದದ ಕೀಲುಗಳನ್ನು ಕಟ್ಟಿ ನೇತುಹಾಕುವುದು | ಪಾದದ ಕೀಲುಗಳಲ್ಲಿ ಉಜ್ಜು ಗಾಯಗಳು ಅಥವಾ ಗಾಯದ ಕಲೆಗಳು. ಕೀಲುಗಳಲ್ಲಿ ಮುರಿತ. |
| 9. ಮಂಡಿಗಳ ಹಿಂಭಾಗದಲ್ಲಿ ಅಡ್ಡಲಾಗಿ ಕಡ್ಡಿಯೊಂದನ್ನಿರಿಸಿ ಕೈಗಳನ್ನು ಹಿಂದಕ್ಕೆ ತಂದು ಮುಂಗೈಗಳನ್ನು ಸೇರಿಸಿ, ತಲೆಕೆಳಗಾಗಿ "ಜಾಕ್" ಕಟ್ಟಿ ನೇತುಹಾಕುವುದು | ಹಣೆಯ ಮುಂಭಾಗದಲ್ಲಿ ಮತ್ತು ಮಂಡಿಗಳ ಹಿಂಭಾಗದಲ್ಲಿ ತರಚಿದ ಅಥವಾ ಗಾಯದ ಗುರುತುಗಳು. ಮುಂಗೈಗಳು ಹಾಗೂ ಪಾದದ ಕೀಲುಗಳಲ್ಲಿ ಗುರುತುಗಳು. |

| ಚಿತ್ರಹಿಂಸೆಯ ತಂತ್ರಗಳು | ದೇಹದ ಮೇಲೆ ಕಂಡುಬಂದ ಗುರುತುಗಳು |
|---|---|
| **ಉಸಿರುಕಟ್ಟಿಸುವ ರೀತಿಯಲ್ಲಿ** | |
| 10. ತಲೆಯನ್ನು ನೀರಿನೊಳಕ್ಕೆ, ಕೆಲವೊಮ್ಮೆ ಕೊಳಕು ನೀರಿನೊಳಕ್ಕೆ ಅದುಮಿ ಮುಳುಗಿಸುವುದು "ವೆಟ್ ಸಬ್‌ಮೆರೀನ್". | ಬಾಯಿ,ಗಂಟಲು,ಅನ್ನನಾಳ,ಶ್ವಾಸನಾಳ ಗಳಲ್ಲಿ ಕಂಡುಬಂದ ಮಲ ಅಥವಾ ಮಲದಂತಹ ಯಾವುದಾದರೂ ಕೊಳಚೆ ವಸ್ತು. |
| 11. ತಲೆಯನ್ನು ಪ್ಲಾಸ್ಟಿಕ್ ಚೀಲದೊಳಕ್ಕೆ ತೂರಿಸಿ ಕಟ್ಟುವುದು (" ಡ್ರೈ ಸಬ್ ಮೆರೀನ್") | ಗಂಟಲಿಗೆ ಸಂಬಂಧಿಸಿದ ತೊಂದರೆಗಳು |
| **ಲೈಂಗಿಕ ಕಿರುಕುಳ** | |
| 12. ಲೈಂಗಿಕ ಕಿರುಕುಳಗಳು | ಲೈಂಗಿಕ ರೋಗಗಳು, ಗರ್ಭ ಧರಿಸುವಿಕೆ, ಸ್ತನಗಳಿಗೆ ಗಾಯ, ಜನನಾಂಗದ ಹೊರಭಾಗ, ಯೋನಿ, ಗುದದ್ವಾರ ಅಥವಾ ದೊಡ್ಡ ಕರುಳಿನ ತುದಿಯ ಭಾಗಕ್ಕೆ ಬಿದ್ದ ಪೆಟ್ಟು. |
| **ಬಲವಂತವಾಗಿ ವಿವಿಧ ಭಂಗಿಗಳಲ್ಲಿ ಇರಿಸುವುದು** | |
| 13. ನಿರಂತರವಾಗಿ ನಿಂತುಕೊಂಡೇ ಇರುವಂತೆ ಮಾಡುವುದು | |
| 14. ಸರಳೊಂದರ ಮೇಲೆ ಕುದುರೆಕಾಲಿನಲ್ಲಿ ಬಲವಂತವಾಗಿ ಕೂರಿಸುವುದು ("ಸಾ ಹಾರ್ಸ್") . | ಗುದದ್ವಾರಕ್ಕೆ ಸಂಬಂಧಿಸಿದಂತೆ ಅಥವಾ ವೃಷಣಗಳಲ್ಲಿ ರಕ್ತಸ್ರಾವ |
| **ವಿದ್ಯುದಾಘಾತ ನೀಡುವುದು** | |
| 15. ಕ್ಯಾಟಲ್ ಪ್ರಾಡ್ | ಸುಟ್ಟ ಗಾಯಗಳು: ಗಾಯಗಳು ಸಂಭವಿಸಿದ ಅವಧಿಗೆ ತಕ್ಕಂತೆ ಅವು ಕಂಡುಬರುತ್ತವೆ. ತಕ್ಷಣದ ಗಾಯಗಳಾಗಿದ್ದರೆ: ಕೆಂಪನೆಯ ಗುರುತುಗಳು, ಬೊಬ್ಬೆಗಳು, ಮತ್ತು/ಅಥವಾ ಕಪ್ಪನೆಯ ಕಪ್ಪಗಿನ ಸ್ರಾವ. ಕೆಲವು ವಾರಗಳ ಹಿಂದಿನವುಗಳಾಗಿದ್ದರೆ: ಸ್ನಾಯುಗಳ ಮೇಲೆ ದುಂಡಗಿನ, ಕೆಂಪಗಾದ ಗಾಯಗಳು. ಹಲವು ತಿಂಗಳುಗಳ ಹಿಂದಿನವುಗಳಾಗಿದ್ದರೆ: ಸಣ್ಣ, ಬಿಳಿಯ- ಕೆಂಪಗಿನ ಅಥವಾ ಕಂದು ಬಣ್ಣದ ಗುರುತುಗಳು. |
| 16. ವಿದ್ಯುತ್ ಮೂಲಕ್ಕೆ ತಂತಿಗಳನ್ನು ಸಂಪರ್ಕಿಸಿ ಹರಿಯಬಿಡುವುದು | |
| 17. ಕಾಯಿಸಿದ ಲೋಹದ ತಿರುಗಣೆಯನ್ನು ಗುದದ್ವಾರದಲ್ಲಿ ತೂರಿಸುವುದು | ಗುದದ್ವಾರದ ಸುತ್ತಮುತ್ತ ಹಾಗೂ ವೃಷಣದ ಚೀಲಗಳ ಸುತ್ತ ಸುಟ್ಟಗಾಯಗಳು. |

18. ನಿರ್ಜಲಿಕರಣ

19. ಪ್ರಾಣಿಗಳ ಕಡಿತಕ್ಕೆ ಈಡು ಮಾಡುವುದು (ಜೇಡ, ಕೀಟಗಳು, ಇಲಿ-ಹೆಗ್ಗಣಗಳು ಹಾಗೂ ನಾಯಿಗಳ ಮೂಲಕ)

ಕಡಿತದ ಗುರುತುಗಳು

# ಹೆಚ್ಚುವರಿ ತನಿಖಾ ಕ್ರಮಗಳು

ದೇಹದ ಉಷ್ಣಾಂಶದಲ್ಲಾಗುವ ಬದಲಾವಣೆಗಳನ್ನು ನಿರ್ಣಯಿಸುವುದು, ಸಾವು ಸಂಭವಿಸಿದ ಮೇಲೆ ಉಂಟಾಗುವ ಸ್ನಾಯುಗಳ ಬಿಗಿತವನ್ನು ಗುರುತಿಸುವುದು ಇವುಗಳನ್ನು ಶವವನ್ನು ಕಂಡ ಕೂಡಲೇ ಮೊದಲನೆಯ ಪರಿಶೀಲನೆಯಲ್ಲೇ ನಡೆಸುವುದರಿಂದ ' ಸಾವು ಸಂಭವಿಸಿದ ಸಮಯ' ವನ್ನು ಸಮರ್ಪಕವಾದ ರೀತಿಯಲ್ಲಿ ಅಳೆಯಲು ಸಹಾಯಕವಾಗುತ್ತದೆ. ಇದನ್ನು ಪ್ರಸ್ತುತ ಚಾಲ್ತಿಯಲ್ಲಿರುವ ತನಿಖಾ ವ್ಯವಸ್ಥೆಯ ಮುಖಾಂತರವೇ ಪಡೆಯಬಹುದು. ಶವವನ್ನು ನೋಡಿದ ಕೂಡಲೇ ಇವೆರಡು ಮಾಪಕಗಳನ್ನು ವೈದ್ಯಾಧಿಕಾರಿಗಳು ಅಥವಾ ತರಬೇತಿ ಪಡೆದಿರುವ ಪೊಲೀಸ್ ಅಧಿಕಾರಿಗಳೇ ವೈಜ್ಞಾನಿಕವಾಗಿ ಪರಿಶೀಲಿಸಿ ಕಂಡುಕೊಳ್ಳಬಹುದಾಗಿದೆ.

**ಉಷ್ಣಾಂಶದಲ್ಲಾಗುವ ಬದಲಾವಣೆ ಮತ್ತು ಮಾಂಸ ಖಂಡಗಳಲ್ಲಿ ಬಿಗಿತ ಉಂಟಾಗತೊಡಗುವುದನ್ನು ಖಚಿತಗೊಳಿಸಲು ಅಗತ್ಯವಾಗಿರುವ ಅಂಶಗಳು:**

ಈ ಕ್ರಮ ಬಹಳ ಸರಳವಾಗಿದ್ದು, ಯಾವುದೇಪೊಲೀಸ್ ಅಧಿಕಾರಿಗಳು ಪೊಲೀಸ್ ತರಬೇತಿ ಕೇಂದ್ರಗಳಲ್ಲಿ ವೈದ್ಯಾಧಿಕಾರಿಗಳಿಂದ ಸಮರ್ಪಕ ತರಬೇತಿ ಪಡೆದಿದ್ದಲ್ಲಿ ಇದನ್ನು ಸುಲಭವಾಗಿ ಗ್ರಹಿಸಬಹುದಾಗಿದೆ. ಈ ಕ್ರಮವು ಕೆಳಗೆ ಸೂಚಿಸಲಾಗಿರುವ ಕೆಲವು ಅಂಶಗಳನ್ನು ಒಳಗೊಂಡಿರುತ್ತವೆ:

(i) ಶವವನ್ನು ಕಂಡ ಸ್ಥಳದಲ್ಲೇ ತನಿಖೆಯನ್ನು ಪ್ರಾರಂಭಿಸುವಾಗ ಮೊದಲನೆಯ ಪರೀಕ್ಷೆಯಲ್ಲೇ 'ಗುದದ್ವಾರದ ಉಷ್ಣತೆ'ಯನ್ನು ಅಳೆಯುವುದು. ಗುದದ್ವಾರದಲ್ಲಿ ತೂರಿಸಬಹುದಾದ ಸರಳ ಉಷ್ಣ ಮಾಪಕವನ್ನು ಶವದ ಗುದದ್ವಾರದಲ್ಲಿ ತೂರಿಸುವುದು. ಮೂರರಿಂದ ಐದು ನಿಮಿಷಗಳಾದ ಮೇಲೆ ಉಷ್ಣಮಾಪಕದಲ್ಲಿ ಕಂಡುಬರುವ ಉಷ್ಣಾಂಶವನ್ನು ಓದುವುದು. ಉಷ್ಣಾಂಶವನ್ನು ಹಾಗೂ ಉಷ್ಣಾಂಶ ಓದಿದ ವೇಳೆಯನ್ನು ತನಿಖಾ ವರದಿಯಲ್ಲಿ ದಾಖಲಿಸುವುದು.

(ii) ಅದೇ ರೀತಿಯಲ್ಲಿ ಮಾಂಸಗಳು ಬಿಗಿಯಲು ತೊಡಗುತ್ತಿರುವುದನ್ನು ನೋಡಲು ಪೊಲೀಸ್ ಅಧಿಕಾರಿಗಳು ಅಂಗಾಂಗಗಳನ್ನು ಬಾಗಿಸಿ ಅವು ಗಡುಸಾಗಲು ತೊಡಗಿವೆಯೇ ಎಂದು ಪರಿಶೀಲಿಸಬೇಕು. ಗಡಸುತನವನ್ನು ಪರಿಶೀಲಿಸಿ ಕಂಡುಕೊಂಡ ಅಂಶಗಳನ್ನು, ಪರಿಶೀಲಿಸಿದ ಸಮಯವನ್ನು ತನಿಖಾ ವರದಿಯಲ್ಲಿ ದಾಖಲಿಸಬೇಕು. ಈ ಪರಿಶೀಲನೆಯು ಶವಪರೀಕ್ಷೆ ನಡೆಸುವಾಗ ವೈದ್ಯರುಗಳಿಗೆ ಸಹಾಯಕವಾಗುತ್ತವೆ.

ಅಧ್ಯಾಯ II

# ಪೋಲೀಸರೊಂದಿಗಿನ ಚಕಮಕಿಯಲ್ಲಿ ಸಂಭವಿಸಿದ ಸಾವಿನ ಪ್ರಕರಣಗಳನ್ನು ಕುರಿತು

## ಪೋಲೀಸರೊಂದಿಗಿನ ಚಕಮಕಿಯಲ್ಲಿ ಸಂಭವಿಸಿದ ಸಾವಿನ ಪ್ರಕರಣಗಳಲ್ಲಿ ಅನುಸರಿಸಬೇಕಾದ ಕ್ರಮಗಳ ಕುರಿತಂತೆ ಮುಖ್ಯಮಂತ್ರಿಗಳಿಗೆ ಬರೆಯಲಾಗಿರುವ ಪತ್ರ

ನ್ಯಾಯಮೂರ್ತಿ ಎಂ. ಎನ್. ವೆಂಕಟಾಚಲಯ್ಯ
ಅಧ್ಯಕ್ಷರು
(ಭಾರತದ ನಿವೃತ್ತ ನ್ಯಾಯಮೂರ್ತಿಗಳು)

ರಾಷ್ಟ್ರೀಯ ಮಾನವ ಹಕ್ಕುಗಳು ಆಯೋಗ
29 ಮಾರ್ಚ್ 1997
ಸರ್ದಾರ್ ಪಟೇಲ್ ಭವನ
ಸಂಸದ್‌ಮಾರ್ಗ
ನವದೆಹಲಿ -110 001

ಆತ್ಮೀಯ ಮುಖ್ಯ ಮಂತ್ರಿಗಳಿಗೆ,

ಅಪರಾಧ ಎಸಗಿದ್ದಾರೆಂದು ಆರೋಪಿಸಲಾಗಿರುವ ವ್ಯಕ್ತಿಗಳನ್ನು ಕಾನೂನಿನ ಪ್ರಕ್ರಿಯೆಗಳಿಗೆ ಒಳಪಡಿಸುವ ಬದಲು ಪೋಲೀಸರು ಖೊಟ್ಟಿ ಚಕಮಕಿಯ ಹೆಸರಿನಲ್ಲಿ ಕೊಂದು ಹಾಕುತ್ತಿರುವ ಪ್ರಕರಣಗಳು ಹೆಚ್ಚುತ್ತಿವೆ ಎಂಬ ಬಗ್ಗೆ ಸಾರ್ವಜನಿಕರಿಂದಲೂ ಸರ್ಕಾರೇತರ ಸಂಸ್ಥೆಗಳಿಂದಲೂ ಆಯೋಗಕ್ಕೆ ಪತ್ರಗಳು ಬರುತ್ತಿವೆ. ಈ ಅಸಹಜ ಸಾವಿನ ಪ್ರಕರಣಗಳಿಗೆ ಕಾರಣರು ಯಾರು ಹಾಗೂ ಸಾವಿಗೀಡಾದ ವ್ಯಕ್ತಿಗಳು ಯಾವುದಾದರೂ ಅಪರಾಧ ಎಸಗಿದ್ದರೇ ಎಂಬುದಕ್ಕೆ ಯಾವುದೇ ತನಿಖೆಯನ್ನು ಕೈಗೊಳ್ಳಲಾಗಿರುವುದಿಲ್ಲ.

2. ಫಿರ್ಯಾದು ಸಂ.234 (1 ರಿಂದ6)/93-94 ರ ಮೂಲಕ ಆಂಧ್ರ ಪ್ರದೇಶ ನಾಗರಿಕ ಸ್ವಾತಂತ್ರ್ಯ ಸಮಿತಿ (ಎಪಿಸಿಎಲ್‌ಸಿ) ಇಂತಹ ಪ್ರಕರಣವೊಂದನ್ನು ಆಯೋಗದ ಮುಂದೆ ಇರಿಸಿದೆ. ತಮ್ಮನ್ನು ಬಂಧಿಸಲು ಬಂದಿದ್ದ ಪೋಲೀಸರ ತಂಡವನ್ನು ಕೊಲ್ಲಲು ಯತ್ನಿಸಿದರೆಂಬ ಆರೋಪದ ಮೇರೆಗೆ ನಿಷೇಧಿತ ಪೀಪಲ್ಸ್ ವಾರ್ ಗ್ರೂಪ್‌ಗೆ ಸೇರಿದವರೆನ್ನಲಾದ ಕೆಲವು ವ್ಯಕ್ತಿಗಳನ್ನು ಪೋಲೀಸರು ಗುಂಡಿಕ್ಕಿ ಕೊಂದಿದ್ದಾರೆಂದು ಈ ದೂರಿನಲ್ಲಿ ಹೇಳಲಾಗಿದೆ. ಮಾತ್ರವಲ್ಲದೆ, ಇದೊಂದು ಅಸಮರ್ಥನೀಯವಾದ, ಪ್ರೇರಣಾ ರಹಿತವಾದ ಕೊಲೆಯಾಗಿದ್ದು ಈ ಪ್ರಕರಣವನ್ನು 'ಖೊಟ್ಟಿ ಮುಖಾಮುಖಿ' ಎಂದು ಎಪಿಸಿಎಲ್‌ಸಿ ವಿವರಿಸುತ್ತದೆ.

3. ಆಂಧ್ರ ಪ್ರದೇಶದಲ್ಲಿ, ಬಹುಶ ಇನ್ನಿತರ ಕಡೆಗಳಲ್ಲಿ ಕೂಡ, ಚಕಮಕಿಯಲ್ಲಿ ಸಾವು ಸಂಭವಿಸಿದಾಗ ಈ ಚಕಮಕಿಯಲ್ಲಿ ತೊಡಗಿದ್ದ ಪೋಲೀಸರ ತಂಡದ ಮುಖ್ಯಸ್ಥರು ಈ ಚಕಮಕಿ

ನಡೆದಿರುವುದರ ಕುರಿತು ಹಾಗೂ ವ್ಯಕ್ತಿಗಳ ಸಾವು ಸಂಭವಿಸಿರುವುದರ ಕುರಿತು ಪೊಲೀಸ್ ಠಾಣೆಗೆ ಮಾಹಿತಿ ನೀಡುವ ರೂಢಿ ಬೆಳೆದು ಬರುತ್ತಿದೆ. ಎಪಿಸಿಎಲ್‌ಸಿ ಮುಂದಿಟ್ಟಿರುವಂತಹ ಎಲ್ಲ ಪ್ರಕರಣಗಳಲ್ಲಿ ಕೊಲ್ಲಲ್ಪಟ್ಟ ವ್ಯಕ್ತಿಗಳು ಪೋಲೀಸರನ್ನು ಕಂಡ ಕೂಡಲೆ ಅವರನ್ನು ಕೊಲ್ಲಲು ಅವರತ್ತ ಗುಂಡು ಹಾರಿಸಿದ್ದಾರೆ, ಆದ್ದರಿಂದ ಭಾರತೀಯ ದಂಡ ಸಂಹಿತೆ 307ನೇ ಪರಿಚ್ಛೇದದ ಪ್ರಕಾರ ಇದು ಕೊಲೆ ಯತ್ನವಾಗಿದ್ದು ಅವರು ಅಪರಾಧಿಗಳಾಗಿದ್ದಾರೆ ಎಂಬ ನಿಲುವನ್ನು ಪೋಲೀಸರು ತಳೆದಿರುತ್ತಾರೆ. ಆದ್ದರಿಂದ ಪೋಲೀಸರು ಆತ್ಮ ರಕ್ಷಣೆಗಾಗಿ ಗುಂಡು ಹಾರಿಸಲಾಗಿದೆ ಎಂದು ತಮ್ಮ ಕೃತ್ಯವನ್ನು ಸಮರ್ಥಿಸಿಕೊಂಡಿದ್ದಾರೆ. ಈ ಮಾಹಿತಿಯು ಪೊಲೀಸ್ ಠಾಣೆಯಲ್ಲಿ ದಾಖಲಾಗಿದ್ದು ಪೋಲೀಸರ ಗುಂಡೇಟಿಗೆ ಬಲಿಯಾಗಿದ್ದು ಸತ್ತವರನ್ನು ಆರೋಪಿಗಳು ಎಂದು ವಿವರಿಸಲಾಗಿದ್ದು, ಪ್ರಥಮ ಮಾಹಿತಿ ವರದಿಯನ್ನು ಕೂಡ ಅದೇ ರೀತಿಯಲ್ಲಿ ಬರೆಯಲಾಗಿದೆ. ಆರೋಪಿಗಳು ಸಾವಿಗೀಡಾಗಿದ್ದಾರೆ ಎನ್ನುವ ದೃಷ್ಟಿಯಿಂದ ಈ ಕುರಿತು ಹೆಚ್ಚಿನ ತನಿಖೆಯನ್ನೇನೂ ಕೈಗೊಳ್ಳದೆ ಪ್ರಕರಣವನ್ನು ಅಲ್ಲಿಗೇ ಮುಚ್ಚಿ ಹಾಕಲಾಗಿದೆ. ಒಂದು ವೇಳೆ ಪೊಲೀಸ್ ಅಧಿಕಾರಿಗಳು ಹಾರಿಸಿದ ಗುಂಡೇಟಿನಿಂದ ಸಾವು ಸಂಭವಿಸಿದ್ದಲ್ಲಿ ಅದು ಕಾನೂನು ಬದ್ಧವಾಗಿ ಸಮರ್ಥನೀಯವೇ ಎಂದು ಖಚಿತಪಡಿಸಿಕೊಳ್ಳುವಂತಹ ಯಾವುದೇ ಪ್ರಯತ್ನಗಳಾಗಿಲ್ಲ. ಅಥವಾ ಒಂದು ವೇಳೆ ಅಂಥ ಪ್ರಯತ್ನಗಳಾಗಿದ್ದಲ್ಲಿ ಕೂಡ ಅವರು ಯಾವ ಬಗೆಯ ಅವರಾಧ ಎಸಗಿದ್ದಾರೆ ಎಂಬುದನ್ನು ಖಚಿತಪಡಿಸಿಕೊಳ್ಳಲಾಗಿಲ್ಲ.

4. ನಮ್ಮ ಕಾನೂನಿನ ಅಡಿಯಲ್ಲಿ, ವ್ಯಕ್ತಿಯೊಬ್ಬರ ಪ್ರಾಣವನ್ನು ತೆಗೆಯುವ ಹಕ್ಕನ್ನು ಪೋಲೀಸರಿಗೆ ಕೊಡಲಾಗಿಲ್ಲ. ಪೋಲೀಸನು ತಾನು ಎಸಗುವ ಕೃತ್ಯದ ಮೂಲಕ ವ್ಯಕ್ತಿಯೊಬ್ಬನು ಕೊಲ್ಲಲ್ಪಟ್ಟರೆ, ಅದು ಕೊಲೆಯ ಅಪರಾಧ ಎಸಗಿರುವುದಕ್ಕೆ ಸರಿಸಮಾನವಾದುದಾಗಿರುತ್ತದೋ ಇಲ್ಲವೋ, ಕಾನೂನಿನ ಪ್ರಕಾರ ಇಂತಹ ಕೊಲೆಯು ಅಪರಾಧವಲ್ಲ ಎಂದು ಸಾಬೀತಾಗದಿದ್ದಲ್ಲಿ ಅವನು ದಂಡನೀಯ ನರಮೇಧ ಎಸಗಿದಂತಾಗುತ್ತದೆ. ಭಾರತದಲ್ಲಿ ಪ್ರಚಲಿತವಿರುವ ಅಪರಾಧ ಕಾನೂನುಗಳ ಪ್ರಕಾರ, ಆತ್ಮ ರಕ್ಷಣೆಯ ಹಕ್ಕನ್ನು ಚಲಾಯಿಸುವ ಪ್ರಯತ್ನದಲ್ಲಿ ಸಾವು ಸಂಭವಿಸಿದರೆ ಅದು ಅಪರಾಧವಲ್ಲ. ವ್ಯಕ್ತಿಯೊಬ್ಬನ ಸಾವಿಗೆ ಕಾರಣಗಳನ್ನು ಪೊಲೀಸ್ ಅಧಿಕಾರಿಗಳು ಮತ್ತೊಂದು ಅವಕಾಶದ ಮೂಲಕ ಸಮರ್ಥಿಸಿಕೊಳ್ಳಬಹುದು. ಅದು ಅಪರಾಧ ದಂಡ ಸಂಹಿತೆಯ ಪರಿಚ್ಛೇದ 46.ಆರೋಪಿತ ಅಪರಾಧಕ್ಕಾಗಿ ಕೊಂದು ಹಾಕಬಹುದಾದ ಅಥವಾ ಜೀವಾವಧಿ ಶಿಕ್ಷೆ ಕೊಡಬಹುದಾದ ವ್ಯಕ್ತಿಯೊಬ್ಬನನ್ನು ಬಂಧಿಸುವಾಗ ಅಗತ್ಯ ಬಿದ್ದರೆ, ಯಾವ ಮಿತಿಯ ವರೆಗೆ ಎಂದರೆ, ಆ ವ್ಯಕ್ತಿ ಸಾಯುವ ಹಾಗೆ ಬಲಪ್ರಯೋಗ ನಡೆಸಲು ಈ ಕಾನೂನು ಪೋಲೀಸರಿಗೆ ಅಧಿಕಾರ ನೀಡುತ್ತದೆ. ಆದ್ದರಿಂದ, ಗುಂಡಿನ ಚಕಮಕಿಯಲ್ಲಿ ಸಾವು ಸಂಭವಿಸಿದಲ್ಲಿ,ಅದಕ್ಕೆ ಸ್ವಯಂ ರಕ್ಷಣೆಯ ನ್ಯಾಯಬದ್ಧವಾದ ಹಕ್ಕನ್ನು ಚಲಾಯಿಸುವ ಸಂದರ್ಭದಲ್ಲಿ ಹಾಗೆ ಸಂಭವಿಸಿತೆಂಬ ಕಾರಣಗಳನ್ನು ನೀಡಿ ಸಮರ್ಥಿಸಿಕೊಳ್ಳಲಾಗದಿದ್ದಲ್ಲಿ, ಅಥವಾ ಅಪರಾಧ ದಂಡ ಸಂಹಿತೆ ಪರಿಚ್ಛೇದ 46ರ ಕೆಳಗೆ ವ್ಯಕ್ತಿಯೊಬ್ಬನನ್ನು ಬಂಧಿಸಲು ನೀಡಲಾದ ಅಧಿಕಾರವನ್ನು ಸರಿಯಾದ ರೀತಿಯಲ್ಲಿ ಚಲಾಯಿಸಿ ಬಳಸಿಕೊಳ್ಳಲಾಗದಿದ್ದಲ್ಲಿ, ಆ ಸಾವು ಸಂಭವಿಸಲು ಕಾರಣನಾದ ಪೊಲೀಸ್ ಅಧಿಕಾರಿ ದಂಡನೀಯ ನರಮೇಧದ ಅಪರಾಧಕ್ಕೆ ತುತ್ತಾಗುತ್ತಾನೆ ಎಂಬುದು ಸ್ಪಷ್ಟವಾಗಿದೆ. ಚಕಮಕಿಯಲ್ಲಿ ಸಂಭವಿಸಿದ ಸಾವಿನ ಪ್ರಕರಣವೊಂದು

ಈ ಮೇಲೆ ಹೇಳಿರುವ ಎರಡು ಪರಿಸ್ಥಿತಿಗಳಲ್ಲಿ ಯಾವುದಾದರೂ ಒಂದರ ಕೆಳಗೆ ಸಮರ್ಥಿಸಿಕೊಳ್ಳುವಂತಿದ್ದರೆ, ಅದನ್ನು ಸಮರ್ಪಕವಾದ ತನಿಖೆ ನಡೆಸುವುದರ ಮೂಲಕ ಮಾತ್ರ ಖಚಿತವಾಗಿ ಹೇಳಬಹುದಾಗಿದೆಯೇ ಹೊರತು ಇನ್ನಾವುದೇ ರೀತಿಯಲ್ಲಲ್ಲ.

5. ಆಂಧ್ರ ಪ್ರದೇಶದ ಪೋಲೀಸರು ಅನುಸರಿಸುವ ಮೇಲೆ ಹೇಳಲಾಗಿರುವ ಕ್ರಮಗಳು ಸಿಂಧುತ್ವವವು ಆಯೋಗದ ಮುಂದೆ ಒಂದು ಸವಾಲಾಗಿ ಪರಿಣಮಿಸಿದೆ. ಎಲ್ಲ ಕಕ್ಷಿದಾರರ ವಾದವನ್ನು ಆಲಿಸಿದ ನಂತರ ಹಾಗೂ ಸಂವಿಧಾನದ ಪರಿಚ್ಛೇದ 21ರಲ್ಲಿ ನೀಡಲಾಗಿರುವ ಶಾಸನಬದ್ಧ ಅವಕಾಶಗಳನ್ನು ಪರಿಶೀಲಿಸಲಾಗಿ ಸರಕಾರದ ಹೊಣೆಗಾರಿಕೆಯೇನೆಂಬುದನ್ನು ಆಯೋಗ ಕಂಡುಕೊಂಡಿದ್ದು, ದಿನಾಂಕ 4.11.1996ರ ತನ್ನ ಆದೇಶದಲ್ಲಿ ಆಯೋಗವು ಆಂಧ್ರ ಪ್ರದೇಶ ಸರಕಾರ ಅನುಸರಿಸಬೇಕಾದ ಕ್ರಮಗಳು ಸಮರ್ಪಕವಾಗಿಲ್ಲ ಹಾಗೂ ಇಂತಹ ಪ್ರಕರಣಗಳಲ್ಲಿ ಅನುಸರಿಸಬೇಕಾದ ಸಮರ್ಪಕವಾದ ಕ್ರಮಗಳು ಇಂತಿವೆ ಎಂಬುದನ್ನೂ ಸೂಚಿಸಿದೆ. ಅನುಸರಿಸಬೇಕಾಗಿರುವ ಸೂಕ್ತ ಕ್ರಮಗಳ ಕುರಿತಾದ ಆದೇಶದ ಪ್ರತಿಯೊಂದನ್ನು ಲಗತ್ತಿಸಲಾಗಿದೆ. ಆಂಧ್ರ ಪ್ರದೇಶ ಸರಕಾರ ಈ ಶಿಫಾರಸುಗಳನ್ನು ಅಂಗೀಕರಿಸಿದೆ.

6. ಇದು ದೇಶದ ಇತರ ಭಾಗಗಳಲ್ಲೂ ಸಂಭವಿಸಬಹುದಾದ ಮಾನವ ಹಕ್ಕುಗಳ ಪ್ರಮುಖ ಪ್ರಶ್ನೆಗಳನ್ನು ಎತ್ತಿರುವುದರಿಂದ ಆಯೋಗವು ಈ ಸೂಕ್ತವಾದ ಕ್ರಮಗಳನ್ನು ಎಲ್ಲ ರಾಜ್ಯಗಳಲ್ಲೂ ಅನುಸರಿಸುವುದಕ್ಕೆ ಶಿಫಾರಸು ಮಾಡಲು ತೀರ್ಮಾನಿಸಿದೆ. ಸಂಕ್ಷಿಪ್ತವಾಗಿ ಈ ಕ್ರಮಗಳು ಹೀಗಿವೆ:

   ಎ. ಪೊಲೀಸ್ ಠಾಣೆಯ ಮುಖ್ಯಸ್ಥರು ಪೋಲೀಸರ ಮತ್ತು ಇತರರ ನಡುವೆ ನಡೆಯುವ ಗುಂಡಿನ ಚಕಮಕಿಯಲ್ಲಿ ಸಂಭವಿಸಿದ ಸಾವಿನ ಮಾಹಿತಿಯನ್ನು ಪಡೆಯುವ ಸಂದರ್ಭದಲ್ಲಿ ಅದನ್ನು ಸೂಕ್ತ ನೋಂದಾವಣಾ ಪುಸ್ತಕದಲ್ಲಿ ನಮೂದಿಸಬೇಕು.

   ಬಿ. ಇದೊಂದು ವಿಚಾರಣಾರ್ಹ ಅಪರಾಧವೇ ಅಲ್ಲವೇ ಎಂಬ ಆಯೋಗದ ಅನುಮಾನವನ್ನು ಪರಿಶೀಲಿಸಲು ಹೀಗೆ ಪಡೆದ ಮಾಹಿತಿಯನ್ನು ಪರಿಶೀಲಿಸಬೇಕಾಗುತ್ತದೆ. ಮಾತ್ರವಲ್ಲದೆ ಯಾರು ಯಾವ ಬಗೆಯ ಅಪರಾಧವನ್ನು ಎಸಗಿದ್ದಾರೆ ಎಂಬುದನ್ನು ಕಂಡುಹಿಡಿಯಲು ಸಾವು ಸಂಭವಿಸಲು ಕಾರಣವಾದ ಸತ್ಯಾಂಶಗಳು ಮತ್ತು ಸನ್ನಿವೇಶಗಳನ್ನು ಶೋಧಿಸಲು ತಕ್ಷಣವೇ ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ.

   ಸಿ. ಚಕಮಕಿಯಲ್ಲಿ ಭಾಗವಹಿಸುವ ಪೊಲೀಸ್ ತಂಡವು ಅದೇ ಪೊಲೀಸ್ ಠಾಣೆಗೆ ಸೇರಿದವರಾಗಿರಬಹುದಾದುದರಿಂದ ಪ್ರಕರಣಗಳ ತನಿಖೆಯ ಜವಾಬ್ದಾರಿಯನ್ನು ರಾಜ್ಯ CID ಯಂತಹ ಯಾವುದಾದರೂ ಸ್ವತಂತ್ರ ಶೋಧನಾ ತಂಡಕ್ಕೆ ವಹಿಸುವುದು ಸೂಕ್ತ.

   ಡಿ. ತನಿಖೆಯ ಫಲಿತಾಂಶದ ಆಧಾರದ ಮೇಲೆ ಪೊಲೀಸ್ ಅಧಿಕಾರಿಯ ಮೇಲೆ ಕಾನೂನು ಕ್ರಮ ಜರುಗಿಸಬೇಕೆನ್ನುವುದು ಕಂಡು ಬಂದಿದ್ದರೆ, ತಪ್ಪು ಯಾರದೆನ್ನುವುದು ಸಾಬೀತಾಗಿರುವುದರಿಂದ ಸಾವಿಗೀಡಾದ ವ್ಯಕ್ತಿಯ ಅವಲಂಬಿತರಿಗೆ ಪರಿಹಾರ ನೀಡಬೇಕೆಂಬ ವಿಚಾರವನ್ನು ಪರಿಗಣಿಸಬಹುದು.

7. ಚಕಮಕಿಯಲ್ಲಿ ಹಾಗೂ ಅಂತಹುದೇ ಮತ್ತಿತರ ಸನ್ನಿವೇಶಗಳಲ್ಲಿ ಸಾವು ಸಂಭವಿಸಿದ ಪ್ರಕರಣಗಳಲ್ಲಿ ಈ ಮೇಲೆ ಸೂಚಿಸಲಾಗಿರುವ ಕ್ರಮಗಳನ್ನೇ ರಾಜ್ಯದ ಎಲ್ಲ ಪೊಲೀಸ್ ಠಾಣೆಗಳಲ್ಲಿ ಅನುಸರಿಸುವಂತೆ ತಮ್ಮ ರಾಜ್ಯದ ಪೊಲೀಸ್ ಮಹಾ ನಿರ್ದೇಶಕರ ಮೂಲಕ ಆದೇಶ ನೀಡಬೇಕಾಗಿ ಈ ಮೂಲಕ ತಮ್ಮನ್ನು ಕೋರುತ್ತೇವೆ.

ಧನ್ಯವಾದಗಳೊಂದಿಗೆ,

ತಮ್ಮ ವಿಶ್ವಾಸಿ,

ಸಹಿ/-

(ಎಮ್. ಎನ್. ವೆಂಕಟಾಚಲಯ್ಯ)

ರಿಗೆ,

ಎಲ್ಲ ರಾಜ್ಯಗಳ/ಕೇಂದ್ರ ಶಾಸಿತ ಪ್ರದೇಶಗಳ ಮುಖ್ಯ ಮಂತ್ರಿಗಳಿಗೆ.

# ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ

## ಸರ್ದಾರ್ ಪಟೇಲ್ ಭವನ

## ಸಂಸದ್ ಮಾರ್ಗ, ನವ ದೆಹಲಿ

ಆಪಾದಕರ ಹೆಸರು : ಎ. ಪಿ. ಸಿ. ಎಲ್. ಸಿ.

ಕಡತ ಸಂಖ್ಯೆಗಳು : 234 (1)/93-94/NHRC
234 (2)/93-94/NHRC
234 (3)/93-94/NHRC
234 (5)/93-94/NHRC
234 (6)/93-94/NHRC

1. ಪಶ್ಚಿಮ ಬಂಗಾಳದ ಉತ್ತರ ಭಾಗದ ನಕ್ಸಲ್‌ಬರಿ ಎಂಬ ಊರಿನ ಕಾನ್ಸು ಸನ್ಯಾಲ್ ಎಂಬ ವ್ಯಕ್ತಿಯ ಪ್ರಾಥಮಿಕ ಮುಂದಾಳುತ್ವದಲ್ಲಿ, ಕೇವಲ ಕೆಲವೇ ಜನರ ಕೈಯಲ್ಲಿ ಆಸ್ತಿಯ ಹಿಡಿತವಿರುವ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಒತ್ತಾಯದ ಪ್ರತಿಭಟನೆ ಮತ್ತು ಸಾಮಾಜಿಕ ಸವಲತ್ತುಗಳ ಹಂಚಿಕೆಯ ಪರಿಕಲ್ಪನೆಯೊಂದು ಹುಟ್ಟಿಕೊಂಡಿತು. ಕಾಲಕ್ರಮೇಣ ಅದು ಈಗ ಎಲ್ಲೆಡೆ ನಕ್ಸಲೈಟ್ ಚಳುವಳಿ ಎಂದು ಕರೆಯಲ್ಪಡುವ ಚಳುವಳಿಯಾಗಿ ಬೆಳೆಯಿತು. ಸ್ವಲ್ಪದರಲ್ಲೇ ಅದು ಬಿಹಾರ, ಒರಿಸ್ಸಾ, ಆಂಧ್ರಪ್ರದೇಶಗಳ ಕೆಲವು ಭಾಗಗಳಲ್ಲಿ ಮತ್ತು ತಮಿಳುನಾಡು, ಮಧ್ಯ ಪ್ರದೇಶ ಮತ್ತು ಮಹಾರಾಷ್ಟ್ರಗಳ ಗಡಿಭಾಗದ ಜಿಲ್ಲೆಗಳಿಗೂ ಅದು ಹರಡಿತು. ನಕ್ಸಲೀಯರು ತಮ್ಮ ಸಿದ್ಧಾಂತಗಳ ಆಧಾರದ ಮೇಲೆ ಅಥವಾ ಕೆಲವೊಮ್ಮೆ ತಮ್ಮ ಮುಂದಾಳುಗಳ ಹೆಸರಿನ ಆಧಾರದ ಮೇಲೆ ವಿವಿಧ ಗುಂಪುಗಳಾಗಿ ಒಡೆದಿದ್ದಾರೆ. ಆಂಧ್ರ ಪ್ರದೇಶದಲ್ಲಿ, ಪ್ರಾರಂಭದಲ್ಲಿ ನಕ್ಸಲೀಯರು ಎಂದು ಕರೆಯಲ್ಪಟ್ಟಿದ್ದರೂ 1980ರ ಹೊತ್ತಿಗೆ ಅವರು "ಪೀಪಲ್ಸ್ ವಾರ್ ಗ್ರೂಪ್" ಪಿ ಡಬ್ಲ್ಯೂ ಜಿ ಎಂಬ ಹೆಸರಿನಿಂದ ತಮ್ಮನ್ನು ಗುರುತಿಸಿಕೊಳ್ಳತೊಡಗಿದರು.

2. ಆಂಧ್ರ ಪ್ರದೇಶದಲ್ಲಿ ಕಾರ್ಯಪ್ರವೃತ್ತವಾಗಿರುವ ಪಿಡಬ್ಲ್ಯೂಜಿಯ ವಿವಿಧ ಗುಂಪುಗಳ ವಿಚಾರಗಳನ್ನೆತ್ತಿಕೊಳ್ಳುವ ಅಗತ್ಯ ಇಲ್ಲಿ ಕಂಡುಬರುವುದಿಲ್ಲ. ಅವುಗಳ ಚಟುವಟಿಕೆಗಳು ಹೆಚ್ಚುಕಡಿಮೆ ಒಂದೇ ರೀತಿಯದಾಗಿದ್ದರೂ ಗುಂಪಿನಿಂದ ಗುಂಪಿಗೆ, ಸನ್ನಿವೇಶದಿಂದ ಸನ್ನಿವೇಶಕ್ಕೆ ಅವುಗಳ ಕಾರ್ಯವಿಧಾನದಲ್ಲಿ ಮಾತ್ರ ವ್ಯತ್ಯಾಸ ಕಂಡುಬರುತ್ತದೆ. ಆಂಧ್ರ ಪ್ರದೇಶದಲ್ಲಿ, ಚಳುವಳಿಯ ಪ್ರಾರಂಭದ ದಿನಗಳಲ್ಲಿ ನಕ್ಸಲೀಯ ಚಳುವಳಿಯು ಶ್ರೀಕಾಕುಳಂ ಜಿಲ್ಲೆ ಹಾಗೂ ಒರಿಸ್ಸಾ ರಾಜ್ಯದ ಗಡಿ ಪ್ರದೇಶಕ್ಕೆ ಸೀಮಿತವಾಗಿದ್ದು ವಾರಂಗಲ್, ಕರೀಮ್‌ನಗರ್ ಮತ್ತು ನಾಲ್ಗೊಂಡ ಎಂಬ ತೆಲಂಗಾಣ ಜಿಲ್ಲೆಗಳಿಗೆ ಹರಡಿತು.

3. ಚಟುವಟಿಕೆಗಳು ಗ್ರಾಮೀಣ ಪ್ರದೇಶಗಳಲ್ಲೇ ಕೇಂದ್ರೀಕೃತವಾಗಿದ್ದರೂ ಕೆಲವು ಸ್ಮರಣೀಯ ಘಟನೆಗಳು ನಗರ ಪ್ರದೇಶಗಳಲ್ಲೂ ನಡೆದವು. ನೂರಾರು ಮಂದಿ ಅಮಾಯಕ ಗ್ರಾಮಸ್ಥರು ಹಾಗೂ ಗಣನೀಯ ಸಂಖ್ಯೆಯಲ್ಲಿ ಪೋಲೀಸರೂ ಪಿಡಬ್ಲ್ಯೂಜಿ ಸದಸ್ಯರಿಂದ ಹತರಾದರು. ಸರಕಾರದ ಆಸ್ತಿ ವಿನಾಶದ ಗುರಿ ಹೊಂದಲಾಗಿದ್ದು, ಅವುಗಳಿಗೆ ಆಗಾಗ ಬೆಂಕಿ ಹಚ್ಚಿ ಅವನ್ನು ಸುಡಲಾಯಿತು.

ಸಾರ್ವಜನಿಕ ಕಛೇರಿಗಳು ನಡೆಯುತ್ತಿದ್ದ ಬಾಡಿಗೆಗೆ ಪಡೆದ ಕಟ್ಟಡಗಳ ಒಡೆಯರು ಕೂಡ ಇದರಿಂದ ಬವಣೆ ಪಡುವಂತಾಯಿತು. ಪ್ರಾರಂಭದಲ್ಲಿ ಆಕ್ರಮಣ ಪ್ರಾಯಶಃ ಶ್ರೀಮಂತರ ಗುಂಪುಗಳ ಮೇಲೆ ನಡೆಯುತ್ತಿದ್ದು, ನಂತರ ಬಡಜನರು ಕೂಡ ಈ ಆಕ್ರಮಣಗಳಿಂದ ತಪ್ಪಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಈ ಆಕ್ರಮಣಗಳು ವ್ಯಕ್ತಿಗಳು ಮತ್ತು ಆಸ್ತಿಯ ಮೇಲೆ ನಡೆಯುತ್ತಿದ್ದವು. ಈ ಆಕ್ರಮಣಗಳಿಂದ ಪುರುಷರು ಸಾವಿಗೆ ತುತ್ತಾದರೆ ಮಹಿಳೆಯರ ಮೇಲೆ ಅತ್ಯಾಚಾರವನ್ನೊಳಗೊಂಡಂತೆ ಹಲಬಗೆಯ ದೈಹಿಕ ದೌರ್ಜನ್ಯಗಳನ್ನು ನಡೆಸಲಾಗುತ್ತಿತ್ತು. ಘಟನೆಯೊಂದರಲ್ಲಿ, ವ್ಯಕ್ತಿಯೊಬ್ಬನನ್ನು ಕೊಂದು ರುಂಡವನ್ನು ಬೇರ್ಪಡಿಸಿ ಹೆಡಿಗೆಯಲ್ಲಿಟ್ಟು ಆತನ ಹೆಂಡತಿಯು ಅದನ್ನು ಬಲವಂತದಿಂದ ತಲೆಯ ಮೇಲೆ ಹೊತ್ತು ಗ್ರಾಮದಲ್ಲಿ ಪ್ರದಕ್ಷಿಣೆ ಬರುವಂತೆ ಮಾಡಲಾಗಿತ್ತು. ಕಾನೂನಿಗೂ ಮೀರಿದ ನಕ್ಸಲೀಯರ ಕಾರ್ಯಾಚರಣೆ ಹಾಗೂ ಚಟುವಟಿಕೆಗಳಿಂದಾಗಿ ಸಾಮಾನ್ಯ ಜನಜೀವನ ಮತ್ತು ಸಾಮಾಜಿಕ ವ್ಯವಸ್ಥೆ ಕಂಗೆಟ್ಟು ಅಸ್ತವ್ಯಸ್ತಗೊಂಡಿದೆ ಎಂಬುದು ನಿರ್ವಿವಾದ. ಆಂಧ್ರ ಪ್ರದೇಶ ಸಾರ್ವಜನಿಕ ಸುರಕ್ಷಾ ನಿಯಮ, 1992 ಪರಿಚ್ಛೇದ 3ರಂತೆ ಸಂಘಟನೆಯೊಂದು ಕಾನೂನುಬಾಹಿರವಾಗಿದೆ ಎಂದು ಘೋಷಿಸುವ ಅಧಿಕಾರವನ್ನು ಚಲಾಯಿಸುವ ಸಶಕ್ತತೆಯನ್ನು ಸರಕಾರಕ್ಕೆ ತಂದುಕೊಡುವ ಶಾಸನವೊಂದನ್ನು ರಾಜ್ಯ ಸರಕಾರ ರೂಪಿಸಿತು. ಕೆಲವು ನಿರ್ದಿಷ್ಟ ಅವಧಿಯವರೆಗೆ ಪಿಡಬ್ಲ್ಯೂಜಿಯು ಕಾನೂನುಬಾಹಿರ ಸಂಘಟನೆಯೆಂದು ಘೋಷಿಸಲ್ಪಟ್ಟಿತು. ಈ ನಿಷೇಧವು ನಡುವೆ ಅಲ್ಪಾವಧಿಯತನಕ ಜಾರಿಯಲ್ಲಿರಲಿಲ್ಲ. ಆದರೆ ಈಗ ಈ ನಿಷೇಧ ಜಾರಿಯಲ್ಲಿದೆ.

4. ಪಿಡಬ್ಲ್ಯೂಜಿಯ ಚಟುವಟಿಕೆಗಳಿಂದಾಗಿ ಕಾನೂನು ಸುವ್ಯವಸ್ಥೆ ಹದಗೆಟ್ಟಿತ್ತು. ಆದ್ದರಿಂದ ಪೋಲೀಸರು ಈ ಕಾನೂನುಬಾಹಿರ ಕಾರ್ಯಾಚರಣೆಗಳನ್ನು ಪ್ರಾರಂಭದಲ್ಲಿ ಕಠಿಣವಾದ, ಕ್ರಮೇಣ ಮತ್ತಷ್ಟು ಕಠಿಣವಾದ ಕ್ರಮಗಳನ್ನು ಅನುಸರಿಸತೊಡಗಿದರು. ಪಿಡಬ್ಲ್ಯೂಜಿಯ ವ್ಯಕ್ತಿಗಳು ತಮ್ಮ ಚಟುವಟಿಕೆಗಳನ್ನು ಗುಂಪಾಗಿ ನಡೆಸುತ್ತಿದ್ದರು. ಆದ್ದರಿಂದ ಕಾನೂನುಬಾಹಿರ ಆಕ್ರಮಣಗಳನ್ನು ಹತೋಟಿಗೆ ತರಲು ಪೋಲೀಸರು ಕೂಡ ಗುಂಪುಗಳನ್ನು ರಚಿಸಿಕೊಂಡು ಪ್ರತಿ ಆಕ್ರಮಣಕ್ಕೆ ತೊಡಗಿದರು. ಇದರಿಂದಾಗಿ ಎರಡು ಗುಂಪುಗಳ ನಡುವೆ ಚಕಮಕಿಗಳು ಪ್ರಾರಂಭವಾದವು. ಪರಿಣಾಮವಾಗಿ ಎರಡೂ ಗುಂಪುಗಳಲ್ಲೂ ಹಲವಾರು ಸಾವು ನೋವುಗಳು ಸಂಭವಿಸಿದವು. ಪಿಡಬ್ಲ್ಯೂಜಿಯ ಕೆಲವು ಸದಸ್ಯರು ಅತ್ಯಾಧುನಿಕ ಶಸ್ತ್ರಾಸ್ತ್ರಗಳನ್ನು ಬಳಸುತ್ತಿದ್ದಾರೆಂಬ ಸುಳಿವಿನ ಮೇರೆಗೆ ಸರಕಾರವು ಪೊಲೀಸ್ ಪಡೆಯನ್ನು ಕೂಡ ಅತ್ಯಾಧುನಿಕ ಶಸ್ತ್ರಾಸ್ತ್ರಗಳಿಂದ ಸಜ್ಜುಗೊಳಿಸಿತು. ಪಿಡಬ್ಲ್ಯೂಜಿಯ ಗುಂಪುಗಳು ಅಷ್ಟರಲ್ಲೇ ನೆಲದಲ್ಲಿ ಹುದುಗಿಸುವ ಸ್ಫೋಟಕಗಳನ್ನು ಹೊಂದುವಲ್ಲಿ ಸಫಲವಾಗಿತ್ತು. ಹಲವು ಗ್ರಾಮೀಣ ರಸ್ತೆಗಳಲ್ಲಿ ಅವನ್ನು ಸ್ಫೋಟಿಸಿ ಪೋಲೀಸರನ್ನು ಗುಂಪುಗುಂಪಾಗಿ ಕೊಂದು ಹಾಕಿದ್ದಲ್ಲದೆ ವಾಹನಗಳನ್ನು ನಾಶಪಡಿಸಲಾಯಿತು.ಆದ್ದರಿಂದ ಪಿಡಬ್ಲ್ಯೂಜಿ ಹಾಗೂ ಪೊಲೀಸ್ ಪಡೆಯ ನಡುವಣ ಸಂಬಂಧವು ಕಹಿಯಾಗಿ ಸಂಪೂರ್ಣ ವೈರತ್ವವನ್ನು ತಾಳಿತು.

5. ಎಪಿಸಿಎಲ್‌ಸಿ ಆಂಧ್ರಪ್ರದೇಶ ರಾಜ್ಯದಲ್ಲಿ ಕಾರ್ಯನಿರತವಾಗಿರುವ ಒಂದು ಸರ್ಕಾರೇತರ ಸಂಸ್ಥೆಯಾಗಿದ್ದು ಹೈದರಾಬಾದಿನಲ್ಲಿ ತನ್ನ ಮುಖ್ಯ ಕಛೇರಿಯನ್ನು ಹೊಂದಿದೆ. ರಾಷ್ಟ್ರಮಟ್ಟದಲ್ಲಿ ಪಿಯುಸಿಎಲ್‌ನೊಂದಿಗೆ ಸಂಬಂಧ ಹೊಂದಿದೆ. ಎಪಿಸಿಎಲ್‌ಸಿ ಮಾರ್ಚ್ 30, 1993ರಂದು

ಆಯೋಗಕ್ಕೆ ದೂರೊಂದನ್ನು ಸಲ್ಲಿಸಿದ್ದು, ಇದು 285 ಪ್ರಕರಣಗಳನ್ನು ಒಳಗೊಂಡಿದೆ. ಪಿಡಬ್ಲ್ಯೂಜಿ ಅಥವಾ ಅದರ ಬೆಂಬಲಿಗರ ಮತ್ತು ಸಹಾನುಭೂತಿ ಹೊಂದಿರುವವರ ವಿರುದ್ಧ ಕಾನೂನುಬದ್ಧ ಕ್ರಮಗಳನ್ನು ಕೈಗೊಂಡು ಅವರು ಅಪರಾಧಿಗಳೆಂದು ಸಾಬೀತಾದಲ್ಲಿ ಮಾತ್ರ ಅವರನ್ನು ಶಿಕ್ಷಿಸುವ ಮಾರ್ಗವನ್ನು ಬಿಟ್ಟು, ಅವರನ್ನು ಮುಗಿಸಿಬಿಡುವುದಕ್ಕಾಗೇ ಪೋಲೀಸರು ಸಂಘಟಿಸಿರುವ ಖೊಟ್ಟಿ ಚಕಮಕಿಗಳು ಇವು ಎಂದು ಅವನ್ನು ಬಣ್ಣಿಸಲಾಗಿದೆ. ಇದರಿಂದ ತಿಳಿದುಬಂದಿರುವುದೇನೆಂದರೆ, ಇವುಗಳಲ್ಲಿ ಹಲವು ಪ್ರಕರಣಗಳು ದೂರು ಸಲ್ಲಿಸಿದ ಒಂದು ವರ್ಷಕ್ಕೂ ಹಿಂದೆ ಸಂಭವಿಸಿದವುಗಳಾಗಿವೆ. ಮಾನವ ಹಕ್ಕುಗಳ ಕಾಯ್ದೆ, 1993ರ ಪರಿಚ್ಛೇದ 36(2) ರ ಮೂಲಕ ಆಯೋಗಕ್ಕೆ ಕೊಡಲಾಗಿರುವ ಒಂದು ವರ್ಷದ ಕಾಲಮಿತಿಯ ಕಾನೂನು ವ್ಯಾಪ್ತಿಯನ್ನು ಇದು ಮೀರಿರುತ್ತದೆ. ಈ ಕಾಲಮಿತಿಯೊಳಗೆ ಸಂಭವಿಸುವ ಪ್ರಕರಣಗಳಿಗೆ ಮಾತ್ರ ಆಪಾದಕರು ತಮ್ಮ ಆಪಾದನೆಗಳನ್ನು ಮಿತಿಗೊಳಿಸಿಕೊಳ್ಳುವಂತೆ ಕೋರಲಾಗಿದೆ. ಅಂತಿಮವಾಗಿ ಅದು ಖೊಟ್ಟಿ ಚಕಮಕಿಯ ಆರು ಪ್ರಕರಣಗಳನ್ನು ಪರಿಶೀಲಿಸುವ ಆಯ್ಕೆಯ ಅವಕಾಶವನ್ನು ಹೊಂದಿದ್ದು ಆ ಪಟ್ಟಿಯನ್ನು ಆಯೋಗಕ್ಕೆ ಸಲ್ಲಿಸಿದೆ. ಅದು ಈ ಕೆಳಗಿನಂತಿದೆ:

1. 234 (1)93-94/NHRC (ಕಾಯಿತ ಯಾಕಯ್ಯನ ಪ್ರಕರಣ)
2. 234 (2)93-94/NHRC (ಚಿನ್ನರಪು ಸಂಗಯ್ಯನ ಪ್ರಕರಣ)
3. 234 (3)93-94/NHRC (ವಾರಿಕುಪ್ಪಲ ಸಂಕರಯ್ಯನ ಪ್ರಕರಣ)
4. 234 (5)93-94/NHRC (ಬಾದವತ್ ಜೈತ್ಯನ ಪ್ರಕರಣ)
5. 234 (6)93-94/NHRC (ಬಟ್ಟು ಆಂಜಯ್ಯ ಹಾಗೂ ಪೆದ್ದಬೋಯಿನ ಸೈದುಲು ಪ್ರಕರಣ)

6. ಈ ಕುರಿತ ಪ್ರಕಟಣೆಯನ್ನು ರವಾನಿಸಿದಾಗ ಸರಕಾರ ಖೊಟ್ಟಿ ಚಕಮಕಿ ಎಂಬ ಹೇಳಿಕೆಯನ್ನು ತಿರಸ್ಕರಿಸಿತು ಮತ್ತು ತನ್ನ ನಡವಳಿಕೆಗೆ ಸಮರ್ಥನೆಯನ್ನು ನೀಡಬಯಸಿತು. ಸರಕಾರದ ಪ್ರತಿಕ್ರಿಯೆಯನ್ನು ಎಪಿಸಿಎಲ್‌ಸಿಗೆ ಕಳಿಸಿದಾಗ ಅದು ತನ್ನ ನಿಲುವನ್ನು ಬಲಪಡಿಸಲು/ಸ್ಥಾಪಿಸಲು ಸಾಕ್ಷಿ ಪುರಾವೆಗಳನ್ನು ಮುಂದಿರಿಸಲು ಅವಕಾಶ ಕೋರಿತು. ಆದ್ದರಿಂದ ಆಯೋಗವು ಸಾಕ್ಷ್ಯಾಧಾರಗಳನ್ನು ಪಡೆಯುವುದಕ್ಕಾಗಿ ಹೈದರಾಬಾದ್‌ನಲ್ಲಿ ಬೈಠಕ್ ನಡೆಸಲು ಒಪ್ಪಿಗೆ ನೀಡಿತು. 1995ನೇ ಆಗಸ್ಟ್ 21ರಿಂದ 24ರವರೆಗೆ ಅಂತಹ ಬೈಠಕ್ ನಡೆಸುವ ವ್ಯವಸ್ಥೆಯನ್ನು ಮಾಡಲು ರಾಜ್ಯ ಸರಕಾರವು ಒಪ್ಪಿಗೆ ನೀಡಿತು.

7. ಆಪಾದಕರ ಕಡೆಯಿಂದ 5 ಪ್ರಕರಣಗಳ ಸಾಕ್ಷ್ಯಾಧಾರಗಳನ್ನು ದಾಖಲಿಸಿಕೊಳ್ಳಲಾಗಿದೆ. ಕೆಲವು ಪ್ರಕರಣಗಳಲ್ಲಿ ರಾಜ್ಯ ಮುಂದಿರಿಸಿದ ಸಾಕ್ಷ್ಯಾಧಾರಗಳಲ್ಲಿ ಕೆಲವು ದಾಖಲೆಗಳನ್ನು ಪ್ರದರ್ಶಿಸಲಾಯಿತು. ಪ್ರಕರಣ ಸಂಖ್ಯೆ 234 (4)/93-94-ಎನ್‌ಎಚ್‌ಆರ್‌ಸಿ ಗೆ ಸಂಬಂಧಿಸಿದಂತೆ ಆಪಾದಕರು ಮತ್ತು ಅವರ ಸಾಕ್ಷಿದಾರರನ್ನು ಯಾವುದೋ ತಿಳಿಯದ ಸ್ಥಳದಲ್ಲಿ ಬಂಧನದಲ್ಲಿರಿಸಲಾಗಿತ್ತು ಎಂಬ ಮನವಿಗೆ ಯಾವುದೇ ಸಾಕ್ಷಿಗಳನ್ನು ಹಾಜರುಪಡಿಸಲಾಗಲಿಲ್ಲ. ಆಪಾದಕರು ಹೈದರಾಬಾದಿನಲ್ಲಿ ಹಾಜರುಪಡಿಸಲಾಗದ ತಮ್ಮ ಸಾಕ್ಷಿದಾರರನ್ನು ಮತ್ತೆ ಹಾಜರುಪಡಿಸುವ ಅವಕಾಶದೊಂದಿಗೆ ಮುಂದಿನ ವಿಚಾರಣೆಯು ದೆಹಲಿಯಲ್ಲಿ ನಡೆಯುವಂತೆ

ಒಪ್ಪಂದವಾಯಿತು. 21ನೇ ಸೆಪ್ಟೆಂಬರ್ 1995ರಂದು ಆಯೋಗವು ಈ ಮುಂದಿನ ನಡವಳಿಕೆಗಳನ್ನು ದಾಖಲಿಸಿತು:

"ಆಂಧ್ರ ಪ್ರದೇಶದಲ್ಲಿ ಪೋಲೀಸರೊಂದಿಗೆ ನಡೆದ ಚಕಮಕಿಯಲ್ಲಿ ಸಂಭವಿಸಿದ ಸಾವು ಎಂದು ಹೇಳಲಾದ, ಸಾಕ್ಷ್ಯಾಧಾರಗಳನ್ನು ನೀಡುವುದಾಗಿ ಎಪಿಸಿಎಲ್‌ಸಿ ಗುರುತಿಸಿದ್ದ ಆರು ಪ್ರಕರಣಗಳ ವಿಚಾರಣೆಯನ್ನು ಆಯೋಗ ನಡೆಸಿದೆ. 1995ನೇ ಆಗಸ್ಟ್ 21ರಿಂದ 24ರವರೆಗೆ ಹೈದರಾಬಾದಿನಲ್ಲಿ ಈ ಆರು ಪ್ರಕರಣಗಳ ಸಾಕ್ಷಿಗಳನ್ನು ಆಲಿಸುವ ವ್ಯವಸ್ಥೆಯನ್ನು ಮಾಡಲಾಗಿತ್ತು. ಐದು ಪ್ರಕರಣಗಳ ಸಾಕ್ಷಿಪುರಾವೆಗಳನ್ನು ದಾಖಲಿಸಲಾಗಿದ್ದು, ಒಂದು ಪ್ರಕರಣದಲ್ಲಿ ಸಾಕ್ಷಿದಾರರು ಹಾಜರಿರಲಿಲ್ಲ. ಕಕ್ಷಿದಾರರು ಇಚ್ಛಿಸಿದಲ್ಲಿ ದೆಹಲಿಯಲ್ಲಿ ಸಾಕ್ಷಿದಾರರನ್ನು ಹಾಜರುಪಡಿಸುವ ಅವಕಾಶವನ್ನು ಅವರಿಗೆ ನೀಡಲಾಗಿದೆ. ಎಪಿಸಿಎಲ್‌ಸಿ ಪರ ವಕೀಲರು ತಾವು ಸಾಕ್ಷಿದಾರರನ್ನು ಹಾಜರುಪಡಿಸುವುದಿಲ್ಲ ಹಾಗೂ ಆ ಪ್ರಕರಣದ ಸಂಬಂಧ ಯಾವುದೇ ಒತ್ತಾಯ ಮಾಡುವುಲ್ಲ ಎಂದು ಹೇಳಿಕೆ ನೀಡಿರುತ್ತಾರೆ. ಆದ್ದರಿಂದ ಈಗಾಗಲೇ ಸಾಕ್ಷ್ಯಾಧಾರಗಳು ದಾಖಲಿಸಲ್ಪಟ್ಟಿರುವ ಉಳಿದಿರುವ ಐದು ಪ್ರಕರಣಗಳಿಗೆ ಮಾತ್ರ ವಿಚಾರಣೆ ಸೀಮಿತವಾಗಿರುತದೆ.

ಮೇಲೆ ಸೂಚಿಸಲಾಗಿರುವ ದಿಕ್ಕಿನಲ್ಲಿ ಪ್ರಯತ್ನಗಳಾಗಲು ಮುಂದಿನ ವಿಚಾರಣೆಗಳು ನಡೆಯಲಿವೆ. ಆಯೋಗದ ಕೋರಿಕೆಯ ಮೇರೆಗೆ ಆಯೋಗಕ್ಕೆ ಸಹಕರಿಸಲು ಖ್ಯಾತ ಸಾಲಿಸಿಟರ್ ಜನರಲ್ ಅವರಾದ ದೀಪಂಕರ್ ಗುಪ್ತಾ ಹಾಜರಾಗಿದ್ದಾರೆ. ಅಂಧ್ರ ಪ್ರದೇಶದ ಅಡ್ವೋಕೇಟ್ ಜನರಲ್ ಒಂದು ಬಾರಿ ಮತ್ತು ಹೆಚ್ಚುವರಿ ಅಡ್ವೋಕೇಟ್ ಜನರಲ್ ಮತ್ತೊಂದು ಬಾರಿ ಆಂಧ್ರ ಪ್ರದೇಶದ ಪರ ವಾದಿಸಿದ್ದಾರೆ. ಶ್ರೀ ಸೀತಾಪತಿ ಆಂಧ್ರ ಪೋಲೀಸರ ಪರ ವಕಾಲತ್ತಿಗಾಗಿ ನೇಮಿಸಲ್ಪಟ್ಟಿದ್ದಾರೆ. ಆಪಾದಕರ ಪರ ವಾದಿಸಲು ಶ್ರೀ ಕಣ್ಣಬೀರನ್ ಅವರು ಇದ್ದರು.

8. ನಾವು ಈ ವಿಚಾರವನ್ನು ಮುಕ್ತಾಯಗೊಳಿಸಿದ ನಂತರ, ರಿಟ್ ಅರ್ಜಿ ಸಂ.16868/95 ದಿನಾಂಕ 14.8.1995 ಕ್ಕೆ ಆಂಧ್ರ ಪ್ರದೇಶ ಉಚ್ಛ ನ್ಯಾಯಾಲಯದ ವಿಭಾಗೀಯ ನ್ಯಾಯಪೀಠದ ತೀರ್ಪು ಮನವಿ ಸಲ್ಲಿಸಿದ್ದವರ ನಿಲುವನ್ನು ಬೆಂಬಲಿಸುವ ರೀತಿಯಲ್ಲಿ ನಮ್ಮ ಮುಂದೆ ಸಲ್ಲಿಸಲ್ಪಟ್ಟಿತು. ಆಯೋಗದ ದಾಖಲೆಗಳು ವರದಿ ಮಾಡುವಂತೆ ಈ ತೀರ್ಮಾನದ ವಿರುದ್ಧ ವಿಶೇಷ ಲೀವ್ ಅರ್ಜಿ ಸಲ್ಲಿಸಲಾಗಿದ್ದು ಸರ್ವೋಚ್ಛ ನ್ಯಾಯಾಲಯವು ಅಂತಿಮವಾಗಿ ಲೀವ್‌ಅನ್ನು ಮಂಜೂರು ಮಾಡಿದ್ದು ತೀರ್ಪನ್ನು ಪ್ರಕಟಿಸುವುದನ್ನು ತಡೆಹಿಡಿದಿದೆ.

9 ಉಚ್ಛ ನ್ಯಾಯಾಲಯದ ತೀರ್ಪು ಈ ವಿಚಾರಕ್ಕೆ ಅನ್ವಯವಾಗುತ್ತದೆ. ಈ ಕಾರಣ ನಾವು ಸರ್ವೋಚ್ಛ ನ್ಯಾಯಾಲಯದ ತೀರ್ಮಾನಕ್ಕಾಗಿ ಕಾದಿದ್ದೆವು. ಆದರೆ ಅದು ಹೆಚ್ಚಿನ ಕಾಲಾವಕಾಶವನ್ನು ತೆಗೆದುಕೊಳ್ಳುವ ಸಾಧ್ಯತೆ ಇರುವುದರಿಂದ ಅದನ್ನು ಕಾಯದೆ ಶಿಫಾರಸುಗಳನ್ನು ಮುಂದಿಡುತ್ತಿದ್ದೇವೆ.

10. ಪರಿಗಣಿಸಬೇಕೆಂಬುದಾಗಿ ನಮ್ಮ ಮುಂದೆ ಒತ್ತಾಯಪೂರ್ವಕವಾಗಿ ಮಂಡಿತವಾಗಿದ್ದ ಐದು ಪ್ರಕರಣಗಳ ಸತ್ಯಾಂಶಗಳನ್ನು ಸಂಕ್ಷಿಪ್ತವಾಗಿ ವಿವರಿಸಲು ಇಚ್ಛಿಸುತ್ತೇವೆ.

1. ಪ್ರಕರಣ ಸಂ.234 (1)93-94

ಈ ಪ್ರಕರಣದಲ್ಲಿನ ಆಪಾದಕರು ಕಾಯಿತ ಲಚ್ಚಯ್ಯ. ಗತಿಸಿದ ಕಾಯಿತ ಲಚ್ಚಯ್ಯ ನಕ್ಸಲೀಯ ಗುಂಪಿನ ಸದಸ್ಯನೂ ಆಗಿರಲಿಲ್ಲ. ನಕ್ಸಲೀಯ ಚಟುವಟಿಕೆಗಳಲ್ಲಿ ಎಂದಿಗೂ ಭಾಗವಹಿಸಿರಲಿಲ್ಲ. ಆರ್‌ಟಿಸಿ ಬಸ್ಸನ್ನು ಸುಟ್ಟ ಪ್ರಕರಣಕ್ಕೆ ಸಂಬಂಧಿಸಿದಂತೆ ಇನ್ನೂ ಇತ್ಯರ್ಥವಾಗದೆ ಉಳಿದಿರುವ ಅಪರಾಧ ಪ್ರಕರಣವೊಂದು ಆತನ ಮೇಲಿತ್ತು. 26ಮಂದಿ ಇತರರೊಡನೆ ಸೇರಿಕೊಂಡು ಈ ಕೃತ್ಯ ಎಸಗಿರುವನೆಂದು ಆ ಪ್ರಕರಣ ಹೇಳುತ್ತದೆ. ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಆತ ನ್ಯಾಯಾಲಯಕ್ಕೆ ಪದೇ ಪದೇ ಬರುತ್ತಿದ್ದ. ಆತನ ಕುಟುಂಬಕ್ಕೆ 1 ಎಕರೆ ನೀರಾವರಿ ಜಮೀನು ಇತ್ತು. ಆತ ಜಮೀನಿನಲ್ಲಿ ವ್ಯವಸಾಯದ ಕೆಲಸ ಮಾಡುತ್ತಿದ್ದ, ಜೊತೆಗೆ ತನ್ನ ಕೈಕೆಳಗೆ 14 ಮಂದಿ ಕೂಲಿ ಕಾರ್ಮಿಕರನ್ನಿರಿಸಿಕೊಂಡು ಲಾರಿಗೆ ಲೋಡ್ ಮಾಡಿಸುವ ಕೆಲಸ ಮಾಡುತ್ತಿದ್ದ.

25.5.1993 ರಂದು ನಾಲ್ಕು ಲಾರಿಗಳ ಲೋಡಿಂಗ್ ಕೆಲಸ ಮುಗಿಸಿ ಬೀಡಿ ಎಲೆಗಳನ್ನು ತೆಗೆದುಕೊಳ್ಳಲು ಗ್ರಾಮಕ್ಕೆ ಬಂದಿದ್ದ. ಆ ಕೆಲಸ ಮುಗಿಸಿಕೊಂಡು ರಾತ್ರಿ 10 ಗಂಟೆಗೆ ಮಲಗಿ ನಿದ್ರೆ ಹೋದ. ಮಧ್ಯ ರಾತ್ರಿ 1 ಗಂಟೆಯ ಹೊತ್ತಿಗೆ 60 ರಿಂದ 70 ಮಂದಿ ಪೋಲೀಸರು ಗ್ರಾಮಕ್ಕೆ ಬಂದರು. ಅವರು ಆತನ ಮನೆಯ ಬಳಿಗೆ ಬಂದಾಗ ಮನೆಯವರೆಲ್ಲ ನಿದ್ರಿಸುತ್ತಿದ್ದರು. ಸುಮಾರು 30 ಮಂದಿ ಪೋಲೀಸರು ಮನೆಯೊಳಕ್ಕೆ ನುಗ್ಗಿದರು. ಅವರು ಅತ್ಯಂತ ಪ್ರಕಾಶಮಾನವಾದ ಟಾರ್ಚ್ ಹೊತ್ತಿಸಿದಾಗ PW 3 (ಆಪಾದಕರ ಪರ ಸಾಕ್ಷಿ) ಎಚ್ಚರಗೊಂಡರು. ಆತ ಕಿರುಚಿಕೊಂಡಾಗ, ಕುಟುಂಬದ ಇತರ ಸದಸ್ಯರೂ ಎಚ್ಚರಗೊಂಡರು. ಯಾಕಯ್ಯನನ್ನು ಮನೆಯಿಂದ ಹೊರಕ್ಕೆಳೆಯಲು ಪ್ರಯತ್ನಿಸುತ್ತಿದ್ದ ಸಬ್ ಇನ್ಸ್‌ಪೆಕ್ಟರ್ ಕುಮಾರಸ್ವಾಮಿಯನ್ನು ಅವರು ಗುರುತಿಸಿದರು. ಅತನನ್ನು ಹೊರಕ್ಕೆಳೆಯುವುದನ್ನು ಕುಟುಂಬದವರು ತಡೆಯಲು ಪ್ರಯತ್ನಿಸಿದಾಗ ಪೋಲೀಸರಿಂದ ಬಲಪ್ರಯೋಗ ನಡೆಯಿತು. 26.5.1993ರಂದು ಅಂದರೆ ಮಾರನೆಯ ದಿನ, PWs 1 ಮತ್ತು 3 ಗ್ರಾಮದ ಸರಪಂಚ (ಆಪಾದಕರ ಪರ ಸಾಕ್ಷಿದಾರರ ಗುಂಪು) ಮತ್ತು ಇತರ ಕೆಲವರೊಂದಿಗೆ ನೆರೆಯ ಪೊಲೀಸ್ ಠಾಣೆಗೆ ಆತನನ್ನು ಎಲ್ಲಿದ್ದಾನೆಂದು ವಿಚಾರಿಸಲು ಹೋದರು. ಎಟುರ್‌ನಗರಮ್ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಆತನನ್ನು 25.5.1993ರ ಬೆಳಿಗ್ಗೆ 9 ಗಂಟೆಗೆ ಕೊಂದು ಹಾಕಲಾಗಿದೆ ಎಂದು ತಿಳಿದು ಬಂದಿತು. PWs 1 ಮತ್ತು 2 ಕ್ರಮವಾಗಿ ಮೃತನ ತಂದೆ ತಾಯಿರಾಗಿದ್ದು, ಪೋಲೀಸರ ಕೈಗಳಲ್ಲಿ ಆತ ಕೊಲ್ಲಲ್ಪಟ್ಟಿದ್ದಾನೆಂಬ ಮಾಹಿತಿಯನ್ನು ಅವರಿಗೆ ತಿಳಿಸಲಾಯಿತು. ಇತ್ಯರ್ಥಗೊಳ್ಳದ ಪ್ರಕರಣವೊಂದರಲ್ಲಿ ಹಿಂದೆ ಆತನನ್ನು ಬಂಧಿಸಲಾಗಿದ್ದು, ನಿಗದಿತ ದಿನಗಳಲ್ಲಿ ಆತ ನ್ಯಾಯಾಲಯಕ್ಕೆ ಹಾಜರಾಗುತ್ತಿದ್ದ ಎಂಬ ವಾಸ್ತವಾಂಶ ತಿಳಿದಿದ್ದರೂ ಆತನೊಬ್ಬ ಇನ್ನೂ ಗುರುತಿಸಲ್ಪಡದ ನಕ್ಸಲೀಯನೆಂಬುದೇ ಪೋಲೀಸರ ವಾದವಾಗಿತ್ತು. ಮಂಗಾಪೇಟೋ ಪೊಲೀಸ್ ಠಾಣೆಯ ಸಬ್ ಇನ್ಸ್‌ಪೆಕ್ಟರ್ ಮಧುಸೂದನ್ (RW 1), ಚಕಮಕಿಯಲ್ಲಿ ಭಾಗವಹಿಸಿ ಈ ದಾಳಿಯ ತಂಡದ ಮುಂದಾಳತ್ವವನ್ನು ವಹಿಸಿದ್ದ. ಚಕಮಕಿಯಲ್ಲಿ ಆಕ್ರಮಿತ ನಕ್ಸಲೀಯರೆಲ್ಲರೂ ಓಲಿವ್ ಹಸಿರು ಬಣ್ಣದ ಸಮವಸ್ತ್ರ ತೊಟ್ಟಿದ್ದರು. ಆದರೆ ಈತ ಅಂತಹ ಉಡುಪನ್ನು ಧರಿಸಿರಲಿಲ್ಲ ಎಂಬುದನ್ನು ಆತ ವಾದ ಪ್ರತಿವಾದಗಳ ಸಂದರ್ಭದಲ್ಲಿ ಒಪ್ಪಿಕೊಂಡಿದ್ದ. ಆತ ಒಂದು ಲುಂಗಿ ಮತ್ತು ಷರ್ಟನ್ನು ತೊಟ್ಟಿದ್ದ ಎಂದು ತನಿಖಾ ವರದಿ ಹೇಳುತ್ತದೆ. ಮೃತಪಟ್ಟವನ ತಂಗಿ PW 4, ಪೋಲೀಸರು ಸಾಕ್ಷಿದಾರರನ್ನು

ಆಯೋಗದಿಂದ ದೂರವಿರಿಸಲು ಪ್ರಯತ್ನಗಳನ್ನು ಮಾಡಿದ್ದರು ಎಂದು ಹೇಳಿದ್ದಾಳೆ. ಆಕೆಯನ್ನೂ, ಮೃತನ ವಿಧವೆಯನ್ನು ಅವರ ವಾಸ ಸ್ಥಳದಿಂದ ಸುಮಾರು 140 ಕಿ.ಮಿ. ದೂರವಿರುವ ಗ್ರಾಮವೊಂದಕ್ಕೆ ಪೋಲೀಸರು ಕರೆದೊಯ್ದರು ಎಂದು ಆಕೆ ಹೇಳಿದ್ದಾಳೆ. ಈ ಚಕಮಕಿಯಲ್ಲಿ 24 ಮಂದಿ ಪೋಲೀಸರು ಹಾಗೂ 12 ಮಂದಿ ನಕ್ಸಲೀಯರು ಇದ್ದರೆಂದು ಪೊಲೀಸ್ ಪರ ಸಾಕ್ಷಿಗಳು ಒಪ್ಪಿಕೊಂಡಿರುತ್ತಾರೆ. ಎರಡೂ ತಂಡಗಳ ನಡುವೆ ಕೇವಲ 50 ಗಜಗಳ ಅಂತರವಿದ್ದು, ಹಗಲು ಹೊತ್ತಿನಲ್ಲೇ ಗುಂಡಿನ ಚಕಮಕಿ ಅರ್ಧ ಗಂಟೆಯ ಕಾಲ ನಡೆದಿದೆ. ಆದರೂ ಒಬ್ಬನೇ ಒಬ್ಬ ಪೊಲೀಸ್ ಮೃತಪಟ್ಟಿಲ್ಲ, ಆದರೆ ನಕ್ಸಲೀಯರೆಂದು ಕರೆಯಲಾಗುವ ಎಲ್ಲರೂ ಮೃತರಾಗಿದ್ದಾರೆ. ಶವಪರೀಕ್ಷೆಯ ವರದಿ (Exhibit R7)ಯಲ್ಲಿ ಕಂಡುಬಂದಿರುವಂತೆ ಮೃತ ವ್ಯಕ್ತಿಯ ಮೂರು ಮೂಳೆಗಳು ಮುರಿದಿವೆ. ಅದು ಗುಂಡೇಟಿನಿಂದಾಗಿರುವ ಮುರಿತವಲ್ಲ, ಬದಲಿಗೆ ದೇಹದ ಮೇಲೆ ಬಲಪ್ರಯೋಗ ನಡೆದಾಗಿನ ಭಂಗಿಯಿಂದ ಸಂಭವಿಸಿದ್ದು ಆತನ ಮೇಲೆ ಎಸಗಿದ ದೌರ್ಜನ್ಯದಿಂದಾಗಿ ಗಾಯಗಳಾಗಿದ್ದು ಆತತನ್ನು ಹಿಂಸಿಸಿ ಕೊಲ್ಲಲಾಗಿದೆ ಎಂಬುದನ್ನು ಇದು ತೋರಿಸಿಕೊಡುತ್ತದೆ. ಮೃತನನ್ನು ಪೊಲೀಸ್ ಠಾಣೆಗೆ ಕರೆದೊಯ್ಯಲಾಗಿದೆ, ಅಲ್ಲಿ ಆತನನ್ನು ಹಿಂಸಿಸಿ ನಂತರ ಗುಂಡಿಕ್ಕಿ ಕೊಲ್ಲಲಾಗಿದೆ ಎಂಬ ವಾಸ್ತವಾಂಶವನ್ನು ಇದು ಎತ್ತಿ ತೋರಿಸುತ್ತದೆ. ಗುಂಡೇಟಿನಿಂದಾದ ಗಾಯಗಳು ದೇಹದ ಮೇಲ್ಭಾಗದಲ್ಲಿ ಇದೆ - ಎದೆ, ಭುಜ ಇತ್ಯಾದಿ. ಕೊಲ್ಲುವ ಉದ್ದೇಶದಿಂದಲೇ ಹಾಗೆ ಮಾಡಲಾಗಿದೆ ಎಂಬುದನ್ನು ಇದು ಸೂಚಿಸುತ್ತದೆ.

ಮೌಖಿಕ ಹಾಗೂ ದಾಖಲಿತ ಸಾಕ್ಷ್ಯಾಧಾರಗಳು ಈ ಮುಂದೆ ಸೂಚಿಸಿಲಾಗಿರುವ ತೀರ್ಮಾನಕ್ಕೆ ಎಡೆ ಮಾಡುತ್ತದೆ ಎಂದು ಆಪಾದಕರ ಪರ ವಕೀಲರು ವಾದ ಮಂಡಿಸುತ್ತಾರೆ

I. ಮೃತಪಟ್ಟ ವ್ಯಕ್ತಿಯು ಒಬ್ಬ ಕೃಷಿಕನಾಗಿದ್ದು, ವೃತ್ತಿಯಲ್ಲಿ ಲಾರಿ ಲೋಡಿಂಗ್ ಕೆಲಸ ಮಾಡುತ್ತಿದ್ದನೇ ಹೊರತು ನಕ್ಸಲೀಯನಾಗಿರಲಿಲ್ಲ.

II. ಆತನ ವಿರುದ್ಧವಾಗಿ ಇದ್ದುದೆಂದರೆ, ಸಂಭವಿಸಿದಂದಿನಿಂದ ಇತ್ಯರ್ಥಗೊಳ್ಳದ ಬೆಂಕಿ ಹಚ್ಚಿದ ಪ್ರಕರಣವೊಂದರ ಆರೋಪ ಮಾತ್ರ.

III. ಆತನನ್ನು ಹಲವಾರು ಸಾಕ್ಷಿದಾರರ ಸಮ್ಮುಖದಲ್ಲಿ ಆತನ ಮನೆಯಿಂದ ಪೊಲೀಸ್ ಠಾಣೆಗೆ ಕರೆದೊಯ್ಯಲಾಯಿತು ಹಾಗೂ ಚಕಮಕಿಯಲ್ಲಿ ಕೊಲ್ಲಲಾಯಿತು.

IV. ಬಹಳ ದೀರ್ಘಕಾಲದಿಂದ ಈ ಪ್ರಕರಣ ಮ್ಯಾಜಿಸ್ಟ್ರೇಟರ ಮುಂದೆ ವಿಚಾರಣೆಯಾಗದೆ ಹಾಗೆಯೇ ಉಳಿದಿದ್ದು, ಆಯೋಗವು ತನ್ನ ವಿಚಾರಣೆಯ ಪರಿಧಿಯಲ್ಲಿ ಈ ಪ್ರಕರಣವನ್ನು ಕೂಡ ಸೇರಿಸಲು ತೀರ್ಮಾನಿಸಿದ ಮೇಲೆಯೇ ಅದು ಸಂಪೂರ್ಣಗೊಂಡಿತು.

V. ಸಾಕ್ಷಿದಾರರನ್ನು ಆಯೋಗದಿಂದ ದೂರವಿರಿಸಲು ಪೋಲೀಸರು ತೀವ್ರ ಪ್ರಯತ್ನಗಳನ್ನು ನಡೆಸಿದರು.

ನಮ್ಮ ಅಭಿಪ್ರಾಯದಲ್ಲಿ, ಸಾಕ್ಷಿ ಪುರಾವೆಗಳ ಮೂಲಕ ಕಂಡುಬಂದಿರುವಂತೆ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಲಾಗಿ ಹಾಗೂ ಮೇಲ್ನೋಟಕ್ಕೆ ತೋರುವ ಅಂಶಗಳ ಮೂಲಕ ಈ ಮೇಲಿನ ಸಲಹೆಗಳನ್ನು ನಾವು ನೀಡಿರುತ್ತೇವೆ.

**ಪ್ರಕರಣ ಸಂ.234(2)/93-94**

ಮೃತ ಸಂಗಯ್ಯನು ಆಂಧ್ರ ಪ್ರದೇಶದ ಮೇದಕ್ ಜಿಲ್ಲೆಯ ವಾರಿಗುಂತಮ್ ಗ್ರಾಮದ ನಿವಾಸಿಯಾಗಿದ್ದು ಸಿಪಿಐ(ಎಮ್‌ಎಲ್)ನ ಕಾರ್ಯಕರ್ತನಾಗಿದ್ದ. ಮೇ 25, 1993ರಂದು ಆತ ತನ್ನ ಸ್ವಂತ ಜಮೀನಿಗೆ ಹೋಗಿದ್ದ. ಹೆಂಡತಿ ಅಲ್ಲಿಗೆ ತಂದಿದ್ದ ಊಟವನ್ನು ಉಂಡು ಆತ ವಾರಿಗುಂತಮ್‌ಗೆ ಹೋಗಿದ್ದ. ಹೆಂಡತಿಗೆ ಬರುವಂತೆ ಹೇಳಿ ಕಳಿಸಿ ಮತ್ತೆ ಅವರು ಜಮೀನಿನಲ್ಲಿ ಪರಸ್ಪರ ಭೇಟಿಯಾಗಿದ್ದರು. ಆಪಾದಕರ ಪ್ರಕಾರ ಮೃತನನ್ನು ಆತನ ಕೆಲಸದ ಸ್ಥಳದಿಂದ ಕರೆದೊಯ್ದು ಪೋಲೀಸರು ಗುಂಡಿಕ್ಕಿ ಕೊಂದಿದ್ದಾರೆ. ಪ್ರತಿವಾದಿಯ ಹೇಳಿಕೆಯ ಪ್ರಕಾರ ಸ್ಥಳೀಯ ಅರಣ್ಯ ಪ್ರದೇಶವನ್ನು ಜಾಲಾಡಿದಾಗ ತೀವ್ರವಾದಿಗಳ ಗುಂಪೊಂದು ಅವರ ಕಣ್ಣಿಗೆ ಬಿದ್ದಿತ್ತು. ಬೆಳಗಿನ ಜಾವ 5 ಗಂಟೆಯ ಹೊತ್ತಿನಲ್ಲಿ ಗುಂಡಿನ ಚಕಮಕಿನ ನಡೆದು ಈ ವ್ಯಕ್ತಿ ಗುಂಡೇಟಿಗೆ ಬಲಿಯಾದ.

12. ಹೇಳಿಕೆಯನ್ನು ಬಲಪಡಿಸುವ ಉದ್ದೇಶದಿಂದ ಆಪಾದಕರು ನಾಲ್ವರು ಸಾಕ್ಷಿದಾರರ ವಿಚಾರಣೆ ಮಾಡಿದ್ದು ಸರಕಾರ ಒಬ್ಬ ವ್ಯಕ್ತಿಯನ್ನು ವಿಚಾರಣೆ ನಡೆಸಿತು. ಆಪಾದಕರ ಸಾಕ್ಷಿದಾರರು ಮೃತನು ನಡೆದ ಚಕಮಕಿಯಲ್ಲಿ ಗುಂಡೇಟಿಗೆ ಬಲಿಯಾಗಿ ಸತ್ತನೆಂದು ಹೇಳಿಕೆ ನೀಡಿದರು. ಶ್ರೀ ಸೀತಾಪತಿಯವರು ಆಪಾದಕರ ಪರ ಸಾಕ್ಷಿದಾರರನ್ನು ಸುದೀರ್ಘವಾಗಿ ಪ್ರಶ್ನಿಸಿದರು. ಸಹಜವೆಂದು ಪರಿಗಣಿಸಬೇಕಾಗಿದ್ದ ಸಾಕ್ಷಿದಾರರ ಸಾಕ್ಷ್ಯಾಧಾರಗಳನ್ನು ಬದಿಗೆ ಸರಿಸುವಂತೆ ಹೇಳಲಾಯಿತು. RW-1 ಮೇದಕ್ ವೃತ್ತದ ಆಗಿನ ಸರ್ಕಲ್ ಇನ್ಸ್‌ಪೆಕ್ಟರ್ ಆಗಿದ್ದವನು. ಆತನ ವಿಚಾರಣೆ ನಡೆಸಿದಾಗ ಆತ ಆತನ ಮಾಹಿತಿಯ ಪ್ರಕಾರ ದಾಖಲಾಗಿರುವ ಈ ಪ್ರಕರಣದ ತನಿಖಾಧಿಕಾರಿ ಕೂಡ ಎಂಬುದು ತಿಳಿದುಬಂದಿತು. ಅಪಾದಕನ ಪ್ರಕಾರ ಸಾವು ಸಂಭವಿಸಿದೆ, ನಡೆಯಿತೆಂದು ಹೇಳಲಾಗುವ ಗುಂಡಿನ ಚಕಮಕಿಯಿಂದಾಗಿ ಯಾವ ಕಾರ್ಯಗಳೂ ಆಗಿಲ್ಲ. ಶವಪರೀಕ್ಷೆಯ ವರದಿಯಲ್ಲಿ ಮೃತನ ಶರೀರದ ಮೇಲೆ ಗುಂಡೇಟಿನಿಂದಾದ ಮೂರು ಗಾಯಗಳು ಹಾಗೂ ಒಂದು ತರಚು ಗಾಯ ಆಗಿರುವುದು ಕಂಡುಬಂದಿದೆ. ಸಾಕ್ಷ್ಯಾಧಾರಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಗ್ರಾಮದ ಜಮೀನಿನಿಂದ ಮೃತನನ್ನು ಕರೆದೊಯ್ಯಲಾಗಿದೆ ಎಂಬ ಸಾಕ್ಷ್ಯಾಧಾರವನ್ನು ಮುಟ್ಟದೇ ಇರುವುದು ಮೇಲ್ನೋಟಕ್ಕೇ ಕಂಡುಬರುತ್ತದೆ. ಸರಿಯಾದ ತನಿಖೆ ನಡೆಯಬಾರದೆಂಬ ಉದ್ದೇಶದಿಂದ ಆಪಾದಕನೇ ಸ್ವತಃ ತನಿಖಾಧಿಕಾರಿಯ ಪಾತ್ರವನ್ನು ವಹಿಸಿರುತ್ತಾನೆ.

**III. ಪ್ರಕರಣರ ಸಂ.234(3)/93-94**

13. ವಾರಿಕುಪ್ಪಲ ಶಂಕರಯ್ಯ ಯಾವುದೇ ಬಗೆಯ ನಕ್ಸಲೀಯ ಚಟುವಟಿಕೆಗಳಲ್ಲಿ ಭಾಗವಹಿಸಿರಲಿಲ್ಲ. ಮಾತ್ರವಲ್ಲದೆ ಆತ ಯಾವತ್ತೂ ಬಂಧಿಸಲ್ಪಟ್ಟಿರಲಿಲ್ಲ. ಪೋಲೀಸರ ದಾಖಲೆಗಳಲ್ಲಿ ಆತನ ಹೆಸರು ಕೂಡ ಇರಲಿಲ್ಲ. ಆತನ ಸಾವು ಸಂಭವಿಸಿದ ಮೂರು ವರ್ಷ ಹಿಂದೆ ತನ್ನ ತಂದೆಯ ಊರಿನಿಂದ ಆತ ತನ್ನ ತಾಯಿಯ ತವರೂರಾದ ಅಚಂಪೇಟೆ ಮಂಡಲದ ಇನೊಲು ಗ್ರಾಮಕ್ಕೆ ವಾಸವನ್ನು ಸ್ಥಳಾಂತರಿಸಿದ. ಅಲ್ಲಿ ಶಾಲಾ ಕಟ್ಟಡವನ್ನು ಕಟ್ಟುವ ಕೆಲಸದಲ್ಲಿ ತನ್ನ ಮಾವನಿಗೆ ಸಹಾಯ ಮಾಡುವುದು ಆತನ ಉದ್ದೇಶವಾಗಿತ್ತು. ಆ ಕೆಲಸ ಮುಗಿದ ಮೇಲೆ ಮೇಸ್ತ್ರಿಯಾಗಿ ಕೆಲಸ ಮಾಡಿಕೊಂಡು ಆತ ಅದೇ ಊರಿನಲ್ಲಿ ವಾಸಿಸತೊಡಗಿದ.

1993ನೇ ಜುಲೈ ತಿಂಗಳಿನಲ್ಲಿ ಮೃತನು ಮದವತ್ ಮಧ್ಯ ಎಂಬುವವರೊಬ್ಬರ ಮನೆಯನ್ನು ಕಟ್ಟುವ ಕೆಲಸದಲ್ಲಿ ತೊಡಗಿದ್ದ. 5.6.1993ರಂದು ಬೆಳಿಗ್ಗೆ ಮೃತ ತನ್ನ ಪತ್ನಿ PW 1, ಯೊಂದಿಗೆ ಮನೆ ಕಟ್ಟಿಸುತ್ತಿದ್ದ ಪುಟ್ಟ ಹಳ್ಳಿಗೆ ತನ್ನ ಗ್ರಾಮದಿಂದ ಹೊರಟ. ಶಾಂತಮ್ಮ ಸಂಜೆ 6 ಗಂಟೆಯ ಹೊತ್ತಿಗೆ ಇನೊಲು ಗ್ರಾಮಕ್ಕೆ  ಒಬ್ಬಳೇ ಹಿಂದಿರುಗಿದಳು. ಮೃತನು ತನ್ನ ಕಾಲಿನಲ್ಲಿ ಆಗಿದ್ದ ಗಾಯಕ್ಕೆ ಚಿಕಿತ್ಸೆ ಪಡೆಯಲು ಅಚಮ್ ಪೇಟೆಯ ಸರ್ಕಾರಿ ಆಸ್ಪತ್ರೆಗೆ ಹೋಗಿದ್ದಾನೆಂದು PW 1ನೊಂದಿಗೆ ಹೇಳಿದಳು.  ಆತ ಬಸ್ಸಿನಲ್ಲಿ ಹಿಂದಿರುಗುತ್ತಿದ್ದಾಗ, ಅಚಮ್ ಪೇಟೆಯ ಹೊರಭಾಗದ ಚೆಕ್‌ಪೋಸ್ಟಿನ ಬಳಿ ಸಾದಾ ಬಟ್ಟೆ ಧರಿಸಿದ್ದ ನಾಲ್ವರು ಪೋಲೀಸರು ಆತತನ್ನು ಬಲವಂತವಾಗಿ ಬಸ್ಸಿನಿಂದ ಕೆಳಕ್ಕಿಳಿಸಿದರು. ಅಚಮ್ ಪೇಟೆ ಹಾಗೂ ಅಮರಾಬಾದ್ ಪೊಲೀಸ್ ಠಾಣೆಗಳಲ್ಲಿ 6.6.1993ರಂದು ಶಾಂತಮ್ಮ ಹಾಗೂ PW 1ರ ವಿಚಾರಣೆಯನ್ನು ನಡೆಸಲಾಯಿತು. ಆದರೆ ಪೋಲೀಸರು ಮೃತನನ್ನು ಬಂಧಿಸಿರುವ ಬಗ್ಗೆ ತಮಗೇನೂ ತಿಳಿದಿಲ್ಲವೆಂದು ಅವರಿಗೆ ಹೇಳಲಾಯಿತು. ಸಾವು ಸಂಭವಿಸಿತೆಂದು ಹೇಳಲಾಗುವ ಚಕಮಕಿಯಲ್ಲಿ ಭಾಗವಹಿಸಿದ್ದ ಪೊಲೀಸ್ ತಂಡದ ನಾಯಕ 6.6.1993ರ ಬೆಳಿಗ್ಗೆ 7 ಗಂಟೆಗೆ ಅಮರಾಬಾದ್ ಪೊಲೀಸ್ ಠಾಣೆಗೆ ಈ ಚಕಮಕಿಯಲ್ಲಿ ಈತನ ಸಾವು ಸಂಭವಿಸಿದೆ ಎಂಬ ಮಾಹಿತಿಯನ್ನು ಕಳುಹಿಸಿಕೊಟ್ಟಿದ್ದಾನೆ. ಸಾವು ಸಂಭವಿಸಿದ ಸುದ್ದಿಯನ್ನು ಮೃತನ ಹೆಂಡತಿಗಾಗಲೀ, ಸಂಬಂಧಿಕರಿಗಾಗಲೀ ತಿಳಿಸಿರಲಿಲ್ಲ. ಅವರು ಆ ಸುದ್ದಿಯನ್ನು ದಿನಪತ್ರಿಕೆಯೊಂದರಿಂದ ತಿಳಿದುಕೊಂಡರು ಎಂಬುದಕ್ಕೆ ಪುರಾವೆಗಳಿವೆ. ಅವರು ಮೃತ ದೇಹವನ್ನು ಕಾಣಲೆಂದು ಬಂದಾಗ ಗುಂಡೇಟಿನಿಂದಾದ ಗಾಯಗಳಲ್ಲದೆ ಇನ್ನಿತರ ಹಲವು ಗಾಯಗಳು ಮೃತನ ಮೈಮೇಲಿದ್ದುದನ್ನು ಅವರು ಕಂಡರು. ಶವಪರೀಕ್ಷೆಯ ವರದಿಯು ಮೂರು ಬಾಸುಂಡೆಗಳಿದ್ದುದಾಗಿ ಹೇಳುತ್ತದೆ. ಇಂತಹ ಬಾಸುಂಡೆಯೊಂದು ಕಣ್ಣಿನ ಅತಿ ಸಮೀಪದಲ್ಲಿತ್ತು. ಈ ಬಾಸುಂಡೆಗಳು ಮೊಂಡಾದ ಯಾವುದೋ ಆಯುಧದ ಪೆಟ್ಟಿನಿಂದಾಗಿ ಸಂಭವಿಸಿದೆ ಎಂದು ಶವ ಪರೀಕ್ಷೆ ನಡೆಸಿದ ವೈದ್ಯರು ವರದಿ ಮಾಡಿದ್ದಾರೆ. ನಮ್ಮ ಎದುರಿನಲ್ಲಿ ಮ್ಯಾಜಿಸ್ಟ್ರೇಟರಿಂದ ವಿಚಾರಣೆ ನಡೆದು PWS 5, 6 ಹಾಗೂ 10 ಇವರು ಪುರಾವೆಗಳನ್ನು ನೀಡಿದ್ದಾರೆ. ಮ್ಯಾಜಿಸ್ಟ್ರೇಟರಿಂದ 2 ವರ್ಷಗಳಿಂದಲೂ ನಡೆಯುತ್ತಿದ್ದ ವಿಚಾರಣೆ ಪೂರ್ಣಗೊಂಡಿರಲಿಲ್ಲ. ದಾಳಿ ಮಾಡಿದ ತಂಡದ ನಾಯಕತ್ವ ವಹಿಸಿದ್ದ ಪೊಲೀಸ್ ಇನ್ಸಪೆಕ್ಟರ್, RW 1 ಸ್ವತಃ ತಾನೇ ತನಿಖಾಧಿಕಾರಿಯಾಗಿದ್ದ. ಅಡ್ಡ ವಿಚಾರಣೆಯ ಸಂದರ್ಭದಲ್ಲಿ ಆತ ಮೃತನು ಯಾವುದೇ ಅಪರಾಧ ಪ್ರಕರಣದ ಸಂಬಂಧ ಪೋಲೀಸರಿಗೆ ಬೇಕಾದವನಾಗಿರಲಿಲ್ಲ ಎಂಬುದನ್ನು ಒಪ್ಪಿಕೊಂಡಿದ್ದ. ಮೃತನು ಬಿಳುಪು ಬಣ್ಣದ ಪ್ಯಾಂಟ್ ಹಾಗೂ ತೆಳು ಗುಲಾಬಿ ಬಣ್ಣದ ಷರ್ಟನ್ನು ತೊಟ್ಟಿದ್ದನೇ ಹೊರತು PWG ಕಾರ್ಯಕರ್ತರು ಸಾಮಾನ್ಯವಾಗಿ ತೊಡುವ ಸಮವಸ್ತ್ರವಾದ ಓಲಿವ್ ಹಸಿರು ಬಣ್ಣದ ಉಡುಪನ್ನು ತೊಟ್ಟಿರಲಿಲ್ಲ. ಉಳಿದ ಮ್ಯಾಜಿಸ್ಟೀರಿಯಲ್ ತನಿಖೆಯಲ್ಲಿ ನಾವು  ವಿಚಾರಣೆ ನಡೆಸಿದ ಕೆಲವು ಸಾಕ್ಷಿದಾರರ ಮೇಲೆ ಒತ್ತಡವನ್ನು ಹಾಕಲಾಯಿತು. ಈ ಮುಖಾಮುಖಿ ಕಾಳಗದಲ್ಲಿ 17 ಮಂದಿ ಪೋಲೀಸರು ಹಾಗೂ 10ರಿಂದ 12 ಮಂದಿ ನಕ್ಸಲೀಯರಿದ್ದುದಾಗಿ PW 1 ನೀಡಿರುವ ಪುರಾವೆಯಲ್ಲಿ ಸ್ಪಷ್ಟವಾಗಿ ಸೂಚಿಸಲಾಗಿದೆ. ಗುಂಡಿನ ಚಕಮಕಿ ಸುಮಾರು ಅರ್ಧ ಗಂಟೆಯವರೆಗೆ ನಡೆದುದಾಗಿ ತಿಳಿದು ಬಂದಿದೆ. ಪೋಲೀಸರು ಹಾಗೂ ನಕ್ಸಲೀಯರ ನಡುವಿನ ಅಂತರ ಸುಮಾರು 50 ಗಜಗಳಷ್ಟಿದ್ದು, ಪೋಲೀಸರಿಗೆ ಮಾತ್ರ ಯಾವುದೇ ಹಾನಿ ಸಂಭವಿಸಿಲ್ಲ.

## IV. ಪ್ರಕರಣ ಸಂ.234(5)/93-94

14. ಮೃತ ಬದವತ್ ಜೈತ್ಯ PW-1 ಅವರ ಮಗ. PW-2 ಬದವತ್ ಜಗ್ನಿ ಮೃತನ ಪತ್ನಿ. ಮೃತನು ನಕ್ಸಲೀಯನೆಂದು ಹೇಳಲಾಗಿಲ್ಲ. ಆದರೆ ಸ್ಥಳೀಯ ಜಮೀನ್ದಾರರು ನಕ್ಸಲೀಯ ಚಟುವಟಿಕೆಗಳ ಪ್ರಕರಣಗಳಲ್ಲಿ ಆತನನ್ನು ಸಿಲುಕಿಸಿ ಪೋಲೀಸರಿಗೆ ಸುಳ್ಳು ಮಾಹಿತಿ ನೀಡಿದ್ದರು. ಆತ ಪೋಲೀಸರಿಗೆ ಶರಣಾಗಿದ್ದ. ಸರಕಾರ ಆತನಿಗೆ ಬಾಡಿಗೆ ಸೈಕಲ್ ಅಂಗಡಿ ನಡೆಸಲು 12 ಸೈಕಲ್‌ಗಳನ್ನು ಕೊಡಿಸಿತ್ತು. ಅದನ್ನು ಸರಿಯಾಗಿ ನಡೆಸಲು ಸಾಧ್ಯವಾಗದೆ ಆತ ಅವುಗಳನ್ನೆಲ್ಲ ಮಾರಿಬಿಟ್ಟಿದ್ದ. ಆತನ ಕುಟುಂಬದ ಜಮೀನನ್ನು ಮಾರಾಟ ಮಾಡಲಾಗಿತ್ತು. ಹೀಗೆ ದೊರೆತ ಹಣದಿಂದ ಆತ ಕೊಲ್ಲಿ ರಾಷ್ಟ್ರಗಳಿಗೆ ಹೋಗುವ ತಯಾರಿಯಲ್ಲಿದ್ದ. 1989ರಿಂದ ಈಚೆಗೆ ಆತ ಕೊಲ್ಲಿ ರಾಷ್ಟ್ರಗಳಿಗೆ ಹೋಗುವ ಪ್ರಯತ್ನದಲ್ಲಿ ಮುಳುಗಿದ್ದ. ಆತ ಹೆಚ್ಚಿನ ಸಮಯವನ್ನು ಮುಂಬಯಿಯಲ್ಲೇ ಕಳೆದಿದ್ದು ಈ 4 ವರ್ಷದ ಅವಧಿಯಲ್ಲಿ ಆತ ಕೇವಲ ಐದಾರು ಬಾರಿ ಮಾತ್ರ ತನ್ನ ಗ್ರಾಮಕ್ಕೆ ಬಂದಿದ್ದ. ಆತ ಇತ್ಯರ್ಥವಾಗದೆ ಉಳಿದಿದ್ದ ಪ್ರಕರಣಗಳ ವಿಚಾರಣೆಗೆ ಹಾಜರಾಗಲೇ ಇಲ್ಲ. ಆದ್ದರಿಂದ ಜಾಮೀನುರಹಿತ ವಾರಂಟ್ ಜಾರಿ ಮಾಡಲಾಗಿತ್ತು. ಆತ ಮತ್ತುಕ ಆತನ ಹೆಂಡತಿ ಕೂಡಿ ಬರೆದ ಅರ್ಜಿಯನ್ನು ಪರಿಗಣಿಸಿ ಸರಕಾರ ಅವರಿಗೆ ಮನೆಗಾಗಿ ಸಾಲವನ್ನು ಮಂಜೂರು ಮಾಡಿತ್ತು. ಆದ್ದರಿಂದ ಮೃತನು ಸಾಲವನ್ನು ಪಡೆಯುವುದಕ್ಕಾಗಿ ಸಂಪೂರ್ಣಗೊಳಿಸಬೇಕಾದ ವ್ಯವಹಾರಗಳನ್ನು ನಡೆಸಲು ಮುಂಬಯಿಯಿಂದ ಬಂದಿದ್ದ. 1993ನೇ ಅಕ್ಟೋಬರ್ 2ರಂದು ತಾನು ಹಿಂದಿರುಗಿದ ಎರಡೇ ದಿನಗಳಲ್ಲಿ ಆತ ಕೊಲ್ಲಲ್ಪಟ್ಟಿದ್ದ. ಎರಡು ದ್ವಿಚಕ್ರ ವಾಹನಗಳಲ್ಲಿ ಬಂದ ನಾಲ್ವರು ವ್ಯಕ್ತಿಗಳು ಆತನನ್ನು ರಸ್ತೆಯ ಒಂದು ಬದಿಗೆ ಎಳೆದೊಯ್ದು ಆತನನ್ನು ಗುಂಡಿಕ್ಕಿ ಕೊಂದು ಹಾಕಿದರು. ಈ ನಾಲ್ವರಲ್ಲಿ ಒಬ್ಬಾತನು ಒಂದು ವಾಹನ ಏರಿ ಹೊರಟು ಜೀಪು ಮತ್ತು ವ್ಯಾನುಗಳಲ್ಲಿ ತುಂಬಿದ್ದ ಹಲವು ಮಂದಿ ಪೋಲೀಸರೊಂದಿಗೆ ಹಿಂದಿರುಗಿದ. ಆತನನ್ನು ಬಲವಂತವಾಗಿ ಎಳೆದೊಯ್ಯಲಾದ ಈ ಸಂದರ್ಭದಲ್ಲಿ ಆತನ ವಿರುದ್ಧ ಮರಣ ದಂಡನೆಗಾಗಿ ವಾರಂಟ್ ಜಾರಿ ಮಾಡಲಾಗಿದೆ ಎಂಬ ವಿಚಾರವನ್ನು ಯಾರೊಬ್ಬರೂ ಪ್ರಸ್ತಾಪಿಸಿರಲಿಲ್ಲ. 1989ನೇ ಆಗಸ್ಟ್ 9ರಂದು ರಾಜ್ಯದ ಮುಖ್ಯ ಮಂತ್ರಿಗಳು ನಕ್ಸಲೀಯರಿಗೆ ಮಾಡಿಕೊಂಡ ಮನವಿಗೆ ಪ್ರತಿಕ್ರಿಯೆಯಾಗಿ ಆತ ಶರಣಾಗತನಾಗಿದ್ದಾನೆ ಎಂಬುದು ಪೋಲೀಸರು ಆಯೋಗದ ಎದುರಿನಲ್ಲಿ ಮಂಡಿಸಿದ ದಾಖಲೆಗಳಲ್ಲಿ ಕಂಡುಬರುತ್ತದೆ. ಮೂರು ಪ್ರಕರಣಗಳಲ್ಲಿ ಆತ ಭಾಗಿಯಾಗಿದ್ದ ಎಂದು ಹೇಳಲಾಗುವ ಎಲ್ಲ ಪ್ರಕರಣಗಳೂ ಕೂಡ ಆತ ಕಾರಾಗೃಹದಲ್ಲಿದ್ದಾಗ ಸಂಭವಿಸಿದವುಗಳಾಗಿದ್ದವು. ಪ್ರಕರಣರ ತನಿಖೆಗಾಗಿ ಹೋಗಿದ್ದಾಗ ಸ್ಥಳೀಯರ್‍ಯಾರೂ ಪೋಲೀಸರ ನಿಲುವನ್ನು ಬೆಂಬಲಿಸಿರಲಿಲ್ಲ ಎಂಬುದನ್ನು ತನಿಖಾಧಿಕಾರಿ RW-1 ಆಯೋಗದ ಮುಂದೆ ಒಪ್ಪಿಕೊಂಡರು.

## V. ಪ್ರಕರಣ ಸಂ234(6)/93-94

15. ವಾರಂಗಲ್ ಜಿಲ್ಲೆಯ ಕಂಬಾಲಪಲ್ಲಿ ಗ್ರಾಮದ ಆಂಜಯ್ಯ 1993ರ ನವೆಂಬರ್ 1ರಂದು ಸೈದುಲು ಎಂಬವನೊಂದಿಗೆ ಮೋಟಾರ್ ಸೈಕಲಿನ ಮೇಲೆ ಹೋಗುತ್ತಿದ್ದ. ಮೆಹಬೂಬಾಬಾದ್‌ನ ಹೊರ ವಲಯವನ್ನು ಅವರು ತಲುಪಿದಾಗ ರಾತ್ರಿ 9 ಗಂಟೆಯಾಗಿತ್ತು. ಡೆಪ್ಯುಟಿ ಸೂರಿಂಡೆಂಟೆಂಟ್ ಆಫ್ ಪೊಲೀಸ್ ಅಕುಲ ರಾಮಕೃಷ್ಣ ಮುನ್ನಡೆಸುತ್ತಿದ್ದ ಪೊಲೀಸ್ ತಂಡವು ಈ ಇಬ್ಬರನ್ನು

ಖೊಟ್ಟಿ ಮುಖಾಮುಖಿ ಕಾಳಗದಲ್ಲಿ ಕೊಂದು ಹಾಕಿತು. ಪೋಲೀಸರು ಇದಕ್ಕೆ ತಮ್ಮದೇ ಆದ ಕಟ್ಟುಕತೆಯನ್ನು ಮುಂದಿಟ್ಟರು. ಕರೀಮ್ ನಗರ ಜಿಲ್ಲೆಯ ಮಾಟ್ಪಲ್ಲಿ ಪೊಲೀಸ್ ಪಿಕೆಟ್‌ನ್ನು ಮೋಟಾರು ಸೈಕಲ್ಲಿನ ಮೇಲೆ ಸವಾರಿ ಮಾಡುತ್ತಿದ್ದ ಇಬ್ಬರು ತೀವ್ರವಾದಿಗಳು ಸ್ಫೋಟಿಸಿದರು ಎಂಬ ಮಾಹಿತಿ ವಿಎಚ್‌ಎಫ್ ಸೆಟ್ ಮುಖಾಂತರ ದೊರೆಯಿತು. ಮೆಹಬೂಬಾಬಾದ್‌ನ ಡೆಪ್ಯುಟಿ ಸೂಪರಿಂಡೆಂಟೆಂಟ್ ಆಫ್ ಪೊಲೀಸ್ ತನ್ನ ವ್ಯಾಪ್ತಿಯಲ್ಲಿ ಬರುವ ಎಲ್ಲ ಪೊಲೀಸ್ ಠಾಣೆಗಳಿಗೂ ಜಾಗೃತಗೊಳ್ಳಲು ತಿಳಿಸಿದ. ಪೊಲೀಸ್ ತಂಡವೊಂದನ್ನು ಮುನ್ನಡೆಸುತ್ತ ಆತ ಮೆಹಬೂಬಾಬಾದ್‌ನ ಹೊರವಲಯದಲ್ಲಿ ಸಂಚರಿಸುವ ವಾಹನಗಳ ಪರಿಶೋಧನೆಗೆ ತೊಡಗಿದ. ಬೆಲಿಗ್ಗೆ 9.30 ರ ಹೊತ್ತಿಗೆ ನೆಲ್ಲಿಕಿದುರು ರಸ್ತೆಯ ದಿಕ್ಕಿನಿಂದ ಬರುತ್ತಿದ್ದ ಮೋಟಾರ್ ಸೈಕಲ್ಲನ್ನು ತಡೆದು ನಿಲ್ಲಿಸಲು ಪೋಲೀಸರು ಪ್ರಯತ್ನಿಸಿದರು. ಆಗ ಮೋಟಾರ್ ಸೈಕಲ್ ಸವಾರ ಮತ್ತು ಆತನ ಹಿಂದೆ ಕುಳಿತು ಸವಾರಿ ಮಾಡುತ್ತಿದ್ದವರಿಬ್ಬರೂ ಪೋಲೀಸರ ಕೈಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತ ಒಂದು ಗುಂಡಿಯೊಳಕ್ಕೆ ಬಿದ್ದರು. ಹಿಂದೆ ಕುಳಿತು ಸವಾರಿ ಮಾಡುತ್ತಿದ್ದ ವ್ಯಕ್ತಿ ಪೊದೆಯೊಂದರ ಹಿಂದೆ ಅಡಗಿ ಕುಳಿತು ಗುಂಡು ಹಾರಿಸಿದ. ಸ್ವಯಂ ರಕ್ಷಣೆಗಾಗಿ ಪೊಲೀಸ್ ತಂಡದವರು ಕೂಡ 38 ಸುತ್ತು ಗುಂಡು ಹಾರಿಸಿದರು. ಮೋಟಾರ್ ಸೈಕಲ್ ಸವಾರ ಹಾಗೂ ಹಿಂದೆ ಕುಳಿತು ಸವಾರಿ ಮಾಡುತ್ತಿದ್ದವರಿಬ್ಬರೂ ಗುಂಡೇಟಿನಿಂದ ಮೃತಪಟ್ಟರು. PWS 1 ಮತ್ತು 3 ಇವರಿಬ್ಬರೂ ನಡೆದ ಘಟನೆಯನ್ನು ಕಣ್ಣಾರೆ ಕಂಡ ಸಾಕ್ಷಿದಾರರಾಗಿದ್ದಾರೆ. ಆಂಜಯ್ಯ ಸಿಪಿಐ(ಎಂಎಲ್) ಬಗ್ಗೆ ಸಹಾನುಭೂತಿ ಹೊಂದಿದವನಾಗಿದ್ದು ಆ ಪ್ರದೇಶದಲ್ಲಿ ಹಿರಿಯ ವ್ಯಕ್ತಿಯಂತಿದ್ದರು. ಆ ಪ್ರದೇಶದ ಜನರಿಗೆ ಸಂಬಂಧಿಸಿದ ವಿವಿದಗಳಲ್ಲಿ ಮಧ್ಯಸ್ತಿಕೆಯನ್ನು ಆತ ವಹಿಸುತ್ತಿದ್ದರು ಮಾತ್ರವಲ್ಲದೆ ಸಾರ್ವಜನಿಕ ಸಮಸ್ಯೆಗಳ ಪರಿಹಾರಕ್ಕಾಗಿ ಸಂಬಂಧಪಟ್ಟ ಅಧಿಕಾರಿಗಳ ಗಮನ ಸೆಳೆಯುತ್ತಿದ್ದರು.

1993 ನವೆಂಬರ್ 1ರಂದು ರಾತ್ರಿ 8 ಗಂಟೆಯ ಹೊತ್ತಿಗೆ ಬಿ.ಟಿ. ರಸ್ತೆಯ ಮೇಲೆ ಆತ ನಡೆದುಬರುತ್ತಿದ್ದ. ಆಗ ಮೆಹಬೂಬಾಬಾದ್ ಕಡೆಯಿಂದ ಹೆಡ್‌ಲೈಟ್ ಹೊತ್ತಿಸಿಕೊಂಡಿದ್ದ ಒಂದು ಪೊಲೀಸ್ ಜೀಪ್ ಮತ್ತು ಅದಕ್ಕೆ ಎದುರಾಗಿ ಮೋಟಾರ್ ಸೈಕಲ್ಲೊಂದು ಬರುತ್ತಿದ್ದುದನ್ನು ಆತ ನೋಡಿದ. ಹೆಡ್ ಕಾನ್‌ಸ್ಟೇಬಲ್ ಹಾಗೂ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಇವರಿಬ್ಬರೂ ಜೀಪಿನಿಂದ ಇಳಿಯುತ್ತಿರುವುದನ್ನು ಆತ ನೋಡಿದ. ಅವರು ಮೋಟಾರ್ ಸೈಕಲ್ ಸವಾರನನ್ನೂ ಹಿಂದೆ ಕುಳಿತು ಸವಾರಿ ಮಾಡುತ್ತಿದ್ದವನನ್ನೂ ಹಿಡಿದು ಐದು ನಿಮಿಷಗಳೊಳಗಾಗಿ ಕೊಂದು ಹಾಕಿದುದನ್ನು ಆತ ನೋಡಿದ. ಮೃತರಲ್ಲಿ ಒಬ್ಬನಾದ ಸೈದುಲು ಮೈಮೇಲೆ ಇರುವ ಗುಂಡೇಟಿನ ಗಾಯಗಳು ಗುಂಡೇಟು ಆತನ ಹಿಂಬದಿಯಿಂದ ಬಂದೆರಗಿವೆ ಎಂಬುದನ್ನು ಸ್ಪಷ್ಟವಾಗಿ ತೋರಿಸುತ್ತದೆ. ಹಾಗೂ ಆಪಾದಕರ ಪ್ರಕರಣದೊಂದಿಗೆ ಅದು ಹೊಂದಿಕೆಯಾಗುತ್ತದೆ. ಸ್ಫೋಟ ಸಂಭವಿಸಿದ ಸ್ಥಳ ಹಾಗೂ ಈ ವ್ಯಕ್ತಿಗಳು ಗುಂಡೇಟಿನಿಂದ ಹತರಾದ ಸ್ಥಳಗಳ ನಡುವೆ ಸುಮಾರು 300 ಕಿ. ಮೀ.ಗಳಷ್ಟು ಅಂತರವಿದೆ. ಆ ದೂರವನ್ನು ಕೇವಲ ಎರಡುವರೆಗಂಟೆಗಳಲ್ಲಿ ಕ್ರಮಿಸುವುದು ಖಂಡಿತವಾಗಿಯೂ ಕಷ್ಟಸಾಧ್ಯ.

16. ಆಯೋಗದ ಮುಂದೆ ಮಂಡಿಸಲಾದ ಸಾಮಗ್ರಿಗಳನ್ನು ಪರಿಗಣಿಸಿ, ಅದೊಂದು ನಿಜವಾದ ಚಕಮಕಿಯಾಗಿತ್ತೇ ಅಥವಾ ಖೊಟ್ಟಿ ಚಕಮಕಿಯಾಗಿತ್ತೇ ಎಂಬ ಒಂದು ತೀರ್ಮಾನಕ್ಕೆಕ ಬರಲು ನಾವು ಸಾಕ್ಷ್ಯಾಧಾರಗಳನ್ನು ಪರಿಶೀಲಿಸಬೇಕಾಗುತ್ತದೆ. ನಡೆದ ಸಂಭವಗಳನ್ನೆಲ್ಲ ವಿಸ್ತೃತವಾಗಿ

ಪರಿಶೀಲಿಸುವುದು ಮಾತ್ರವಲ್ಲದೆ ಆಯೋಗದ ಮುಂದೆ ಮಂಡಿಸಲಾಗಿರುವ ಸಾಮಗ್ರಿಗಳ ವಿಶ್ಲೇಷಣೆ ಮಾಡುವುದರ ಮೂಲಕ ಆಯೋಗವು ಪೋಲೀಸರು ತಳೆದಿರುವ ನಿಲುವು ಸರಿಯಾದುದೇ ಅಲ್ಲವೇ ಎಂಬುದನ್ನು ಕಂಡುಕೊಳ್ಳಬೇಕಾಗಿತ್ತು. ನಿಜವಾದ ಚಕಮಕಿ ಒಂದು ಹೇಳಿರುವ ನಿಲುವು ಸರಿಯಾಗಿದೆ ಅದನ್ನು ಖೊಟ್ಟಿ ಮುಖಾಮುಖಿ ಎನ್ನುವುದನ್ನು ಎತ್ತಿ ಹಿಡಿಯಲು ಯಾವುದೇ ಅವಕಾಶಗಳಿಲ್ಲ ಎನ್ನುವ ನಿಲುವನ್ನು ಶ್ರೀ ಸೀತಾಪತಿ ತಳೆದರು. ಪ್ರತಿಯೊಂದು ಪ್ರಕರಣವನ್ನು ನಿರ್ವಹಣೆ ಮಾಡುವಾಗಲೂ ನಾವು ಈಗಾಗಲೇ ಸಮಸ್ಯೆಗೆ ಪ್ರಸಕ್ತವಾದ ಹಲವಾರು ವಿಶಿಷ್ಟ ಸಂಗತಿಗಳನ್ನು ಎತ್ತಿ ತೋರಿಸಿದ್ದೇವೆ. ಆಪಾದಕರ ಅಭಿಪ್ರಾಯಗಳು ಮೇಲ್ನೋಟಕ್ಕೆ ತೋರುವಂತೆಯೇ ಸತ್ಯಕ್ಕೆ ಅತೀ ಸಮೀಪವಾಗಿದೆ ಎಂದು ಕಂಡುಬಂದಿದ್ದರೂ ಕೂಡ ಪ್ರಕರಣಗಳು ಸರಿಯಾದ ರೀತಿಯಲ್ಲಿ ವಿಚಾರಣೆ ನಡೆದು ಸತ್ಯವೇನೆಂಬುದು ಖಚಿತಗೊಳ್ಳುವವರೆಗೆ ನಾವು ಯಾವುದೇ ನಿರ್ದಿಷ್ಟ ತೀರ್ಮಾನಕ್ಕೆ ಬರಲು ಇಚ್ಛಿಸುವುದಿಲ್ಲ.

17. ಕೊಲ್ಲಲ್ಪಟ್ಟಿರುವ ವ್ಯಕ್ತಿಗಳು ಅಪರಾಧ ಪ್ರಕರಣಗಳಲ್ಲಿ ಭಾಗವಹಿಸಿದವರಾಗಿದ್ದು, ಅವರ ಬಂಧನಕ್ಕಾಗಿ ವಾರಂಟ್‌ನ್ನು ಜಾರಿಗೊಳಿಸಲಾಗಿದ್ದು, ಮೃತರಾಗಿರುವ ವ್ಯಕ್ತಿಗಳು ಮರಣ ದಂಡನೆ ಅಥವಾ ಜೀವಾವಧಿ ಶಿಕ್ಷೆ ಹೊಂದಲು ಅರ್ಹರಾದ ಅಪರಾಧ ಪ್ರಕರಣಗಳಲ್ಲಿ ಭಾಗಿಯಾದವರಾಗಿದ್ದು ಅವರ ಬಂಧನದ ವಾರಂಟ್ ಜಾರಿ ಮಾಡಿದ್ದಲ್ಲಿ ಅವರ ಮೇಲೆ ಬಲ ಪ್ರಯೋಗ ಮಾಡಲು, ಎಲ್ಲಿಯವರೆಗೆ ಎಂದರೆ, ಅವರನ್ನು ಕೊಂದು ಹಾಕುವಲ್ಲಿಯವರೆಗೆ ಬಲ ಪ್ರಯೋಗ ಮಾಡಲು ಪೋಲೀಸರಿಗೆ ಹಕ್ಕಿದೆ ಎಂಬ ಅವಕಾಶವನ್ನು ನೀಡಲಾಗಿರುವ ಅಪರಾಧ ದಂಡ ಸಂಹಿತೆ 46ನೇ ಪರಿಚ್ಛೇದದ ಮೇಲೆ ಇದು ಅವಲಂಬಿತವಾಗಿದೆ.

ನಕ್ಸಲೀಯ ಗುಂಪುಗಳ (PWG)ಸದಸ್ಯರು ಆಕ್ರಮಣಕಾರಿಗಳಾಗಿದ್ದು, ಪೋಲೀಸರು ಸ್ವಯಂ ರಕ್ಷಣೆ ಮಾಡಿಕೊಳ್ಳದಿದ್ದಲ್ಲಿ ಕಾನೂನು ವಿರೋಧಿ ಸಂಘಟನೆಯ ಸದಸ್ಯರಿಂದ ಹತ್ಯೆಗೀಡಾಗಿಬಿಡಬಹುದು ಆದ್ದರಿಂದ ಪ್ರತಿಯೊಂದು ಚಕಮಕಿಯ ಸಂದರ್ಭದಲ್ಲೂ ತಮಗೆ ಸ್ವಯಂ ರಕ್ಷಣೆ ಮಾಡಿಕೊಳ್ಳುವ ಹಕ್ಕಿದೆ ಎಂಬುದು ಕೂಡ ಪೋಲೀಸರ ಸಮರ್ಥನೆಯಾಗಿದೆ.

18. ಈ ಮೊದಲೇ ಹೇಳಿರುವ ಹಾಗೆ, ಮೃತ ವ್ಯಕ್ತಿಗಳಲ್ಲಿ ಒಬ್ಬಾತನು ಯಾವ ಅಪರಾಧ ಪ್ರಕರಣದಲ್ಲೂ ಸಂಬಂಧ ಹೊಂದಿದವನಾಗಿರಲಿಲ್ಲ. ಇತರ ನಾಲ್ಕು ಪ್ರಕರಣಗಳಲ್ಲಿ ಒಂದರಲ್ಲಿ ಕೂಡ ಪೋಲೀಸರು ಮೃತ ವ್ಯಕ್ತಿಗಳನ್ನು ಬಂಧಿಸುವುದಕ್ಕಾಗಿ ಮಾಡಿರುವ ಯಾವುದೇ ಪ್ರಯತ್ನಗಳಿಗಾಗಲೀ, ಮೃತರು ಅದನ್ನು ಎದುರಿಸಿದ ಸಂದರ್ಭಗಳಿಗಾಗಲೀ ದಾಖಲಿತ ಪುರಾವೆಗಳು ಕಂಡುಬರುವುದಿಲ್ಲ. ಮರಣ ದಂಡನೆ ಅಥವಾ ಜೀವಾವಧಿ ಶಿಕ್ಷೆಯನ್ನು ಹೊಂದಲು ಅರ್ಹನಾಗುವ ಅಪರಾಧದಲ್ಲಿ ಭಾಗಿಯಾಗಿರುವನೆಂದು ಆರೋಪಿಸಲಾಗಿರುವವರು ಮತ್ತು ಬಂಧಿಸುವ ಪ್ರಯತ್ನ ಮಾಡಿದಾಗ ಪ್ರತಿರೋಧಿಸಿದಲ್ಲಿ ಅಂತಹವರನ್ನು ಕೊಂದು ಹಾಕುವ ಸನ್ನಿವೇಶಕ್ಕೆ ಅಪರಾಧ ದಂಡಸಂಹಿತೆ ಪರಿಚ್ಛೇದ 46ರ ಉಪ ಪರಿಚ್ಛೇದ (3)ರಲ್ಲಿ ನೀಡುತ್ತದೆ.

19. ಕಾನೂನುಬದ್ಧವಾಗಿರುವ ಕಾನೂನು ಕ್ರಮಕ್ಕೆ ಹೊರತಾಗಿ ಯಾವುದೇ ವ್ಯಕ್ತಿಯ ಜೀವವನ್ನು ಸೆಳೆಯುವಂತಿಲ್ಲ ಎಂದು ಭಾರತದ ಸಂವಿಧಾನ 21ನೇ ಪರಿಚ್ಛೇದ ಹೇಳುತ್ತದೆ. ನಾಗರಿಕ ಮತ್ತು ರಾಜಕೀಯ ಹಕ್ಕುಗಳ ಅಂತರರಾಷ್ಟ್ರೀಯ ಒಪ್ಪಂದ 6ನೇ ಪರಿಚ್ಛೇದ ಈ ರೀತಿ ಹೇಳುತ್ತದೆ:

1. "ಪ್ರತಿಯೊಬ್ಬ ಮಾನವ ಜೀವಿಗೂ ಬದುಕಲು ಜನ್ಮಸಿದ್ಧ ಹಕ್ಕಿದೆ. ಈ ಹಕ್ಕು ಕಾನೂನುಬದ್ಧವಾಗಿ ಸಂರಕ್ಷಿಸಲ್ಪಡಬೇಕು. ಯಾರಿಗೂ ಆತನ ಅಥವಾ ಆಕೆಯ ಬದುಕು ಇಲ್ಲದೇ ಹೋಗ ಬಾರದು".

ಯಾವುದೇ ವ್ಯಕ್ತಿಗೆ ಸಂಬಂಧಿಸಿದಂತೆ "ಬದುಕುವ ಹಕ್ಕು" ಬಹಳ ಪ್ರಮುಖವಾದದ್ದು ಯಾಕೆಂದರೆ ಇತರ ಎಲ್ಲ ಹಕ್ಕುಗಳೂ ಜೀವ ಉಳಿದಿದ್ದರೆ ಮಾತ್ರ ಅನ್ವಯಿಸುತ್ತದೆ. ಆದುದರಿಂದ ಸಂವಿಧಾನ ಹಾಗೂ ಈ ಅಂತರ ರಾಷ್ಟ್ರೀಯ ಒಪ್ಪಂದಗಳು ಬದುಕಿನ ಹಕ್ಕನ್ನು ಕುರಿತು ಒತ್ತಿ ಹೇಳುತ್ತದೆ. ಆದರೆ ಕಾನೂನಿನಿಂದ ರೂಪಿತವಾಗಿರುವ ಕ್ರಮಗಳಿಂದಲೇ ಜೀವವನ್ನು ತೆಗೆಯಬಹುದಾಗಿದೆ ಎಂಬುದು ಇದರ ಮಿತಿಯಾಗಿರುತ್ತದೆ. ಇದು ಇದು ತೀರಾ ಮೂಲಪಾಠದಲ್ಲಿರುವಂತೆ ನಮಗೆ ಕಂಡುಬರುವುದರಿಂದಾಗಿ ಯಾವುದೇ ಪ್ರಾಧಿಕಾರವು ಇದೇ ಸರಿಯೆಂಬ ಅಂತಿಮ ತೀರ್ಮಾನಕ್ಕೆ ಬರಲು ಬೆಂಬಲಿಸಬೇಕೆಂದೇನೂ ಇಲ್ಲ.

ಮುಂದೆ ವಿಚಾರಣೆ ನಡೆಸಬೇಕಾಗಿರುವ ವಿಚಾರ ಯಾವುದೆಂದರೆ ಈ ಪ್ರಕರಣಗಳಲ್ಲಿನ ವಾಸ್ತವಾಂಶಗಳಿಗಾಗಿ ಪ್ರಾಣ ತೆಗೆಯುವ ಅಧಿಕಾರ ನೀಡುವಂತಹ ಯಾವುದಾದರೂ ಕ್ರಮಗಳಿವೆಯೇ ಎಂಬುದು.

20. ಪೋಲೀಸರೊಂದಿಗಿನ ಗುಂಡಿನ ಚಕಮಕಿಯಲ್ಲಿ ಸಾವು ಸಂಭವಿಸಿದಾಗ ಪೊಲೀಸ್ ಠಾಣೆಯಲ್ಲಿ ಸಾವು ಸಂಭವಿಸಿದೆ ಎಂದು ದಾಖಲಿಸಲಾಗುತ್ತದೆ. ಪ್ರಥಮ ಮಾಹಿತಿ ವರದಿಯಲ್ಲಿ ಆತನನ್ನು ಅಪರಾಧಿ ಎಂದು ತೋರಿಸಲಾಗುತ್ತದೆ. ಒಬ್ಬ ಆಪಾದಿತ ವ್ಯಕ್ತಿಯ ಸಾವು ಎಂಬ ನೆಲೆಯಲ್ಲಿ ಪ್ರಕರಣ ಅಲ್ಲಿಗೇ ಮುಚ್ಚಿಹೋಗುವ ಹಾಗೆ ಅದನ್ನು ಮುಕ್ತಾಯಗೊಳಿಸಿಬಿಡಲಾಗುತ್ತದೆ. ಈ ಕ್ರಮ ಆಂಧ್ರ ಪ್ರದೇಶದಲ್ಲಿ ಚಾಲ್ತಿಯಲ್ಲಿದೆ ಎಂಬ ವಿಚಾರವನ್ನು ಶ್ರೀ ಸೀತಾಪತಿ ಸ್ಪಷ್ಟವಾಗಿ ಒಪ್ಪಿಕೊಂಡರು. ಸಾಮಾನ್ಯ ಬಗೆಯ ಯಾವುದೇ ತನಿಖೆಯನ್ನು ನಡೆಸಲಾಗುವುದಿಲ್ಲ. ಇಂತಹ ಬಹುತೇಕ ಪ್ರಕರಣಗಳಲ್ಲಿ ಪೋಲೀಸರು ಸ್ವಯಂ ರಕ್ಷಣೆಯ ತಮ್ಮ ಹಕ್ಕನ್ನು ಪ್ರತಿಪಾದಿಸಿಕೊಂಡಿದ್ದಾರೆ. ಮಾತ್ರವಲ್ಲದೆ ಚಕಮಕಿಯಲ್ಲಿ ಭಾಗಿಯಾದ ತಂಡವನ್ನು ಮುನ್ನಡೆಸಿದ ಪೊಲೀಸ್ ಅಧಿಕಾರಿಯೇ ಹೆಚ್ಚಿನ ಸಂದರ್ಭಗಳಲ್ಲಿ ಪ್ರಕರಣಗಳ ತನಿಖಾಧಿಕಾರಿಯಾಗಿದ್ದು ಆತ ತನಗೆ ತೋಚಿದ ರೀತಿಯಲ್ಲಿ ಪ್ರಕರಣವನ್ನು ಅಲ್ಲಿಗೇ ಕೊನೆಗೊಳಿಸಿ ಬಿಡುತ್ತಾನೆ.

21. ಮೃತನಾದವನನ್ನು ಅಪರಾಧಿಯೆಂದು ತೋರಿಸಿ, ಪ್ರಕರಣವನ್ನು ಅಲ್ಲಿಗೇ ಮುಚ್ಚಿ ಹಾಕುವ ಸಂಪ್ರದಾಯವು ಅದು ಕಾನೂನು ಕ್ರಮಕ್ಕೆ ವಿರುದ್ಧವಾದುದು ಎಂದು ಶ್ರೀ ಕಣ್ಣಬೀರನ್ ಗಂಭೀರವಾಗಿ ವಾದಿಸಿದರು. ತಜ್ಞರಾದ ಸಾಲಿಸಿಟರ್ ಜನರಲ್ ಹಾಗೂ ಆಂಧ್ರಪ್ರದೇಶದ ಅಡ್ವೋಕೇಟ್ ಜನರಲ್ ಅವರ ಬಳಿ ನಾವು ಕಾನೂನು ಕ್ರಮದ ದೃಷ್ಟಿಯಲ್ಲಿ ಇದೊಂದು ಸಮರ್ಥನೀಯ ನಡವಳಿಕೆಯೇ ಹಾಗೂ ಅಪರಾಧ ನ್ಯಾಯಶಾಸ್ತ್ರದ ಪರೀಕ್ಷೆಯಲ್ಲಿ ನೆಲೆನಿಲ್ಲಬಹುದಾದ ಒಂದು ಕ್ರಮವೇ ಎಂದು ವಿಚಾರಿಸಿದೆವು. ಕಾನೂನುಬದ್ಧವಾಗಿ ಹೀಗೆ ಮಾಡಬಹುದು ಎಂದು ಈ ವಿಚಾರವನ್ನು ಬೆಂಬಲಿಸುವುದು ಅವರಿಬ್ಬರಿಗೂ ಬಹಳ ಕಷ್ಟಕರವಾಗಿ ಕಂಡಿತು. ಒಂದು ನಿಜವಾದ ಚಕಮಕಿಯೇ ನಡೆಯಿತೆಂದು ಒಪ್ಪಿಕೊಂಡರೂ ಕೂಡ ಮೃತರಾದವರೆಲ್ಲ ಅಪರಾಧಿಗಳೆಂದು ಆರೋಪಿಸಲು ಬರುವುದಿಲ್ಲ. ಇಲ್ಲಿನ ಬಹುತೇಕ ಪ್ರಕರಣಗಳಲ್ಲಿ,

ಮೊಟ್ಟಮೊದಲನೆಯದಾಗಿ ಅವರು ನಿರ್ದಿಷ್ಟವಾಗಿ ಸಾಯಿಸುವ ಪ್ರಕ್ರಿಯೆಗೆ ಸಂಬಂಧಿಸಿದಂತೆ ಅಪರಾಧಿಗಳೆಂದು ಅವರ ಮೇಲೆ ಗೂಬೆ ಕೂರಿಸುವಂತಹದ್ದನ್ನು, ಅಂದರೆ, ಬಂಧನವನ್ನು ಪ್ರತಿರೋಧಿಸುವಂತಹದ್ದನ್ನು ಅವರು ಎಸಗಿದ್ದಾರೆ ಆದ್ದರಿಂದ ಅವರನ್ನು ಕೊಲ್ಲಲಾಗಿದೆ ಎಂದು ಸಮರ್ಥಿಸಿಕೊಳ್ಳುವುದರ ಮೂಲಕ ಮೊರೆಯಿಡಲು ಬರುವುದಿಲ್ಲ. ನಾವು ಈ ಮೊದಲೇ ಸೂಚಿಸಿರುವಂತೆ ಪುರಾವೆಗಳನ್ನು ಪರಿಶೀಲಿಸಿದಾಗ ಮುಖಾಮುಖಿ ಕಾಳಗದ ಒಂದೇ ಒಂದು ಪ್ರಕರಣದಲ್ಲೂ ಪೋಲೀಸರ ತಂಡದಲ್ಲಿದ್ದ ಒಬ್ಬ ವ್ಯಕ್ತಿಗೂ ಪೆಟ್ಟಾಗಿಲ್ಲ. ಆದರೆ, ಮತ್ತೊಂದು ಕಡೆಯಲ್ಲಿದ್ದ ಒಬ್ಬ ವ್ಯಕ್ತಿ ಅಥವಾ ಹಲವು ವ್ಯಕ್ತಿಗಳು ಸಾವಿಗೀಡಾಗಿದ್ದಾರೆ. ಭಾರತದಲ್ಲಿ ಜಾರಿಯಲ್ಲಿರುವ ಅಪರಾಧ ಕಾನೂನುಕ್ರಮಗಳ ಪ್ರಕಾರ ಸ್ವಯಂ ರಕ್ಷಣೆಯ ಹಕ್ಕನ್ನು ಕಾನೂನು ಕ್ರಮ ಜರುಗಿಸುವ ಸಂದರ್ಭಕ್ಕೆ ಅನ್ವಯಿಸಿ ಪ್ರತಿಪಾದಿಸುವಾಗ ಆತನೇ ಮನವಿ ಸಲ್ಲಿಸಿ ಅದನ್ನು ಸಾಬೀತುಪಡಿಸಬೇಕು. ಭಾರತೀಯ ದಂಡ ಸಂಹಿತೆಯ ಅಧ್ಯಾಯ IVರಲ್ಲಿ "ಸಾಮಾನ್ಯ ವಿನಾಯಿತಿ"ಯ ಪ್ರಸ್ತಾಪವಿದ್ದು, ಕರ್ತವ್ಯ ನಿರ್ವಹಿಸುತ್ತಿದ್ದಾಗ ಎಂಬ ನೆಪವನ್ನು ಹೊರತುಪಡಿಸಿದಂತೆ ಜನಸಾಮಾನ್ಯರಿಗೆ ಹಾಗೂ ಪೋಲೀಸರಿಗೆ ಯಾವುದೇ ಭಿನ್ನಭೇದವಿಲ್ಲದಂತೆ ಈ ಕಾನೂನು ಅನ್ವಯಿಸುತ್ತದೆ. ಈ ಪರಿಚ್ಛೇದದಲ್ಲಿ ಉದ್ದೇಶಿಸಲಾಗಿರುವ ಪರಿಸ್ಥಿತಿ ಏರ್ಪಟ್ಟಲ್ಲಿ, ಪೋಲೀಸರು ಖಂಡಿತವಾಗಿಯೂ ಹತ್ಯೆಗೈದುದಕ್ಕಾಗಿ ಯಾವುದೇ ಶಿಕ್ಷೆಯಿಲ್ಲದೆಯೇ ಶಸ್ತ್ರಾಸ್ತ್ರವನ್ನೆತ್ತಿಕೊಂಡು ಆಕ್ರಮಣಕಾರರನ್ನು ಕೊಂದುಹಾಕಬಹುದು.

22. ಸ್ವಯಂ ರಕ್ಷಣೆಯ ಹಕ್ಕಿನ ವಿಚಾರವನ್ನು ಪ್ರಸ್ತಾಪಿಸಿದಲ್ಲಿ ಅದನ್ನು ಸಾಬೀತುಪಡಿಸಬೇಕು. ಸನ್ನಿವೇಶಗಳು ತೃಪ್ತಿಕರವಾಗಿದ್ದಲ್ಲಿ ಮಾತ್ರ ವಿನಾಯಿತಿಯ ಅಡಿಯಲ್ಲಿ ರಕ್ಷಣೆಯ ಅರ್ಹತೆಯು ದೊರೆಯುವುದೆಂದು ಅಪರಾಧ ಕಾನೂನು ಹೇಳುತ್ತದೆ. ಪ್ರಾಣಕ್ಕಾಗಿ ಸೆಣಸಾಡುವ ಸಂದರ್ಭವು ಮೀನಮೇಷ ಎಣಿಸುತ್ತಾ ಕೂರಲು ಇರುವ ಸಮಯವಾಗಿರುವುದಿಲ್ಲ. ಸಾಮಾನ್ಯ ಪರಿಸ್ಥಿತಿಗೆ ಹೋಲಿಸಿದಲ್ಲಿ ಇಂಥ ಸಂದರ್ಭಗಳಲ್ಲಿ ವಿಧಿಸುವ ಶಿಕ್ಷೆಯ ಪ್ರಮಾಣ ಕಡಿಮೆಯಾಗಿರುತ್ತದೆ. ಸ್ವಯಂ ರಕ್ಷಣೆಯ ಪ್ರಶ್ನೆಯನ್ನು ನ್ಯಾಯ ವಿಚಾರಣೆಯ ಸಂದರ್ಭದಲ್ಲಿ ಎತ್ತಬಹುದೇ ವಿನಃ ತನಿಖೆಯ ಸಂದರ್ಭದಲ್ಲಲ್ಲ.

ಸಾಕ್ಷ್ಯಾಧಾರಗಳ ಕಾನೂನು ಪರಿಚ್ಛೇದ 105 ಸ್ಪಷ್ಟವಾಗಿ ಹೀಗೆ ಹೇಳುತ್ತದೆ " ವ್ಯಕ್ತಿಯೊಬ್ಬನು ಅಪರಾಧ ಎಸಗಿರುವನೆಂದು ಆರೋಪಿತನಾದಲ್ಲಿ, ಭಾರತೀಯ ದಂಡ ಸಂಹಿತೆಯ (1860ನೇ 45) ಯಾವುದೇ ಸಾಮಾನ್ಯ ವಿನಾಯಿತಿಯ ಒಳಗೆ ಅಥವಾ ಇದೇ ಸಂಹಿತೆಯ ಇನ್ನಾವುದಾದರೂ ಭಾಗದಲ್ಲಿ ಅಥವಾ ಅಪರಾಧವನ್ನು ನಿರ್ವಚಿಸುವ ಇನ್ನಾವುದೇ ಕಾನೂನಿನಲ್ಲಿ ಸೂಚಿಸಲಾಗಿರುವ ಅವಕಾಶದ ಒಳಗೆ ತರಬಯಸಿದಲ್ಲಿ ಸನ್ನಿವೇಶಗಳ ಅಸ್ತಿತ್ವವನ್ನು ಆರೋಪಿಯೇ ಸಾಬೀತುಪಡಿಸಬೇಕು. ಮಾತ್ರವಲ್ಲದೆ ಅಂತಹ ಸನ್ನಿವೇಶವೊಂದು ಇರಲೇ ಇಲ್ಲವೆಂದು ನ್ಯಾಯಾಲಯ ಪರಿಭಾವಿಸಬಹುದಾಗಿರುತ್ತದೆ".

23. ಈಗಾಗಲೇ ಅನುಸರಿಸಲಾಗುತ್ತಿರುವ ಈ ಕ್ರಮ ನ್ಯಾಯಬದ್ಧ ಹಾಗೂ ಸಮರ್ಪಕವಾದುದಾಗಿದೆ ಹಾಗೂ ಒಂದು ಶತಮಾನದಷ್ಟು ಹಿಂದಿನಿಂದಲೂ ಬಳಕೆಯಲ್ಲಿರುವ ಒಂದು ಹಕ್ಕಾಗಿದೆ ಎಂದು ಪೋಲೀಸರ ಪರವಾಗಿದ್ದ ಶ್ರೀ ಸೀತಾಪತಿ ಒತ್ತಿಹೇಳಿದ್ದಾರೆ. ಒಂದು ವೇಳೆ ಇದು ಹೀಗಿರದಿದ್ದಲ್ಲಿ,

ಸಾಮಾನ್ಯವಾದ ಕಾನೂನು ಸುವ್ಯವಸ್ಥೆ ಸಮರ್ಪಕವಾಗಿಲ್ಲದ ಪ್ರದೇಶಗಳಲ್ಲಿ ಹಾಗೂ ಕಾನೂನುಬಾಹಿರ ಸಂಘಟನೆಗಳು ಕಾನೂನನ್ನು ತಮ್ಮ ಕೈಗೆತ್ತಿಕೊಂಡಿದ್ದು ಶಾಂತಿಯನ್ನು ಕದಡುತ್ತಿರುವ ಸ್ಥಳಗಳಲ್ಲಿ ಪೋಲೀಸರು ತಮ್ಮ ಕೆಲಸಕಾರ್ಯಗಳನ್ನು ನಡೆಸಿಕೊಂಡು ಹೋಗುವುದು ಬಹಳ ಕಷ್ಟಸಾಧ್ಯ ಎಂದೂ ಅವರು ಬಹಳ ಸ್ಪಷ್ಟವಾದ ಮಾತುಗಳಲ್ಲಿ ನಮ್ಮ ಮುಂದೆ ಒತ್ತಿ ಹೇಳಿದ್ದಾರೆ. ಇದಕ್ಕೆ ವಿರುದ್ಧವಾದ ನಿಲುವನ್ನು ತೆಗೆದುಕೊಂಡಲ್ಲಿ ಪೋಲೀಸರ ಮಟ್ಟಿಗೆ ಅದು ಅನಾನುಕೂಲಕರವಾಗಿ ಪರಿಣಮಿಸೀತು ಎನ್ನುವ ಒತ್ತಡದ ಮೇರೆಗೆ ಅವರು ಈ ರೀತಿಯಲ್ಲಿ ಹೇಳಿರಬಹುದು. ಇದು ಪರಿಚ್ಛೇದ 21ರ ಚೌಕಟ್ಟಿನೊಳಗೆ ಬರುವಂತಹ ಕಾನೂನುಬದ್ಧ ಕ್ರಮವಾಗಿದೆಯೇ ಎನ್ನುವ ವಿಚಾರ ಪರಿಗಣಿಸಲ್ಪಡಬೇಕಾಗಿದೆಯೇ ಹೊರತು ಅನುಕೂಲ ಅನಾನುಕೂಲ ಎಂಬ ಪ್ರಶ್ನೆಗಳಲ್ಲ. ಶ್ರೀ ಸೀತಾಪತಿಯವರ ನಿಲುವು ಒಪ್ಪಿಕೊಳ್ಳತಕ್ಕದ್ದು ಎಂದು ನಮಗೆ ಅನಿಸುವುದಿಲ್ಲ.

24. ಆದರೂ, ಅಮಾಯಕ ನಾಗರಿಕರ ಹಾಗೂ PWG ಮಂದಿಯ ಕಾನೂನು ಬಾಹಿರ ಚಟುವಟಿಕೆಗಳಿಗೆ ಬಲಿಬೀಳುವ ಪೋಲೀಸರ ಮಾನವ ಹಕ್ಕುಗಳ ಕುರಿತು ಮಾತಾಡಲು ನಾವು ಇಚ್ಛಿಸುತ್ತೇವೆ. ಮಾನವ ಹಕ್ಕುಗಳು ಸಾರ್ವತ್ರಿಕವಾದುದಾಗಿದ್ದು ಪ್ರತಿಯೊಬ್ಬರೂ ಆ ಹಕ್ಕುಗಳಿಗೆ ಅರ್ಹರಾಗಿದ್ದಾರೆ. ವಾದ ಪ್ರತಿವಾದಗಳ ಸಂದರ್ಭದಲ್ಲಿ ನಾವು PWGಯವರು ಇತರರ ಜೀವಕ್ಕೆ ಬೆಲೆಕೊಟ್ಟು ಕಾನೂನಿಗೆ ವಿರುದ್ಧವಾದ ತಮ್ಮ ಚಟುವಟಿಕೆಗಳನ್ನು ನಿಲ್ಲಿಸಿ ಕಾನೂನಿನ ಚೌಕಟ್ಟಿನೊಳಗೆ ತಮ್ಮನ್ನು ತಂದುಕೊಂಡು ಕಾನೂನಿನ ನಿರ್ದೇಶನದ ಪ್ರಕಾರ ಅನುವರ್ತಿಸಬೇಕೆಂದು ಸಲಹೆ ಮಾಡಿದ್ದೇವೆ ಮತ್ತು ಅದನ್ನು ಪುನರುಚ್ಚರಿಸುತ್ತೇವೆ.

25. PWGಯ ಕಾನೂನುಬಾಹಿರ ಚಟುವಟಿಕೆಗಳಿಂದಾಗಿ ಆಂಧ್ರ ಪ್ರದೇಶ ಸರ್ಕಾರ ತೀವ್ರ ಪ್ರಯಾಸ ಹಾಗೂ ಸಂಕಷ್ಟಗಳನ್ನು ಎದುರಿಸುತ್ತಿದೆ ಎಂಬುದರ ಬಗ್ಗೆ ನಮಗೆ ಅರಿವಿದೆ. PWGಯವರು ಆಗಾಗ್ಗೆ ನಡೆಸುವ ಆಕ್ರಮಣಗಳಿಂದ ಪೋಲೀಸರು ಕಂಗೆಟ್ಟಿರುವುದು ಮಾತ್ರವಲ್ಲದೆ ಗ್ರಾಮೀಣ ಮತ್ತು ನಗರ ಪ್ರದೇಶಗಳ ಜನಸಾಮಾನ್ಯರು ಕೂಡ PWGಯವರಿಂದಾಗಿ ಬಹಳಷ್ಟು ತೊಂದರೆಗಳಿಗೀಡಾಗಿದ್ದಾರೆ. ಜನಸಾಮಾನ್ಯರ ಬದುಕು ತೊಂದರೆಯಲ್ಲಿ ಸಿಲುಕಿದೆ. ಅವರ ಆಸ್ತಿ ಪಾಸ್ತಿಗಳಿಗೆ ಯಾವುದೇ ರಕ್ಷಣೆಯಿಲ್ಲವಾಗಿದೆ. ಸಮಾಜದಲ್ಲಿ ಶಾಂತಿ ಸಮಾಧಾನ ನೆಲೆಸಬೇಕಾದರೆ ಅದು PWG ಗುಂಪುಗಳ ಕೈಗಳಲ್ಲಿದೆ.

ನಮ್ಮ ದೃಷ್ಟಿಯಲ್ಲಿ, ಪ್ರಭುತ್ವದ ಸಂಕಷ್ಟಗಳ ನೆಪದಲ್ಲಿ ಸಂವಿಧಾನದ 21ನೇ ಪರಿಚ್ಛೇದದಲ್ಲಿ ಅಥವಾ ಅಂತರರಾಷ್ಟ್ರೀಯ ಒಪ್ಪಂದದ 6ನೇ ಪರಿಚ್ಛೇದದಲ್ಲಿ ನೀಡಿರುವ ಭರವಸೆ ಇಲ್ಲವಾಗಿಸಲು ಅಥವಾ ಕಡಿಮೆಗೊಳಿಸಲು ಸಾಧ್ಯವಾಗದು. ಹಾಗೂ ಈ ಭರವಸೆಯು ಪೂರ್ಣಪ್ರಮಾಣದಲ್ಲಿ ಉಳಿದುಕೊಂಡು ಬರುವಂತೆ ಜಾರಿಗೊಳಿಸುವ ಸಂದರ್ಭದಲ್ಲಿ ಮೂಲಭೂತ ಹಕ್ಕುಗಳಿಗೆ ವಿರುದ್ಧವಾಗಿ ಅದನ್ನು ಮಾಡಲು ಅವಶ್ಯಕತೆಯ ಸಿದ್ಧಾಂತವನ್ನು ಅನ್ವಯಗೊಳಿಸುವುದು ಸಾಧ್ಯವಿಲ್ಲ.

26. ಈ ಮೇಲಿನಂತೆ ಕ್ರಮ ಕೈಗೊಂಡಿರುವುದಕ್ಕೆ ಕಾನೂನಿನಲ್ಲಿ ಅವಕಾಶವಿದೆಯೇ ಎಂಬುದು ನಮ್ಮ ಮುಂದೆ ಈಗ ಇರುವ ಪ್ರಶ್ನೆಯಾಗಿದೆ. ವಿಚಾರಣಾರ್ಹ ಅಪರಾಧವೊಂದರ ಕುರಿತು ಪೊಲೀಸ್ ಠಾಣೆಗೆ ಬಾಯಿಮಾತಿನ ಮೂಲಕ ಮಾಹಿತಿ ದೊರೆತಿದ್ದಲ್ಲಿ, ಪೊಲೀಸ್ ಠಾಣೆಯ

ಮುಖ್ಯಾಧಿಕಾರಿಗಳು ಅದನ್ನು ಬರವಣಿಗೆಯಲ್ಲಿ ದಾಖಲಿಸಿರತಕ್ಕದ್ದು ಎಂಬುದನ್ನು ಅಪರಾಧ ದಂಡ ಸಂಹಿತೆಯ 154ನೇ ಪರಿಚ್ಛೇದ ಹೇಳುತ್ತದೆ. ವಿಚಾರಣಾರ್ಹ ಅಪರಾಧಗಳ ತನಿಖೆ ನಡೆಸುವ ಪೊಲೀಸ್ ಅಧಿಕಾರಿಗಳು ಅಧಿಕಾರವನ್ನು ಹೊಂದಿದ್ದಾರೆಂದು 156ನೇ ಪರಿಚ್ಛೇದ ವಿವರಿಸುತ್ತದೆ. ವಿಚಾರಣಾರ್ಹ ಅಪರಾಧಗಳು ನಡೆದುದಾಗಿ ಪಡೆದ ಮಾಹಿತಿಯ ಮೂಲಕ ಅಥವಾ ಇತರ ಮೂಲಗಳ ಮೂಲಕ ಅನುಮಾನ ಬಂದಲ್ಲಿ ಪೊಲೀಸ್ ಠಾಣೆಯ ಮುಖ್ಯಸ್ಥರು ಈ ಪ್ರಕರಣದ ವಿಚಾರಣೆ ಮಾಡುವ ಅಧಿಕಾರವನ್ನು ಹೊಂದಿರುವ ಮ್ಯಾಜಿಸ್ಟ್ರೇಟರುಗಳಿಗೆ ತನಿಖೆಯನ್ನು ಕೈಗೊಳ್ಳುವಂತೆ ಕೋರಿ ವರದಿ ಸಲ್ಲಿಸತಕ್ಕದ್ದು ಎಂದು 157ನೇ ಪರಿಚ್ಛೇದದಲ್ಲಿ ಹೇಳಲಾಗಿದೆ. ತನಿಖೆಯನ್ನು ಕ್ಷಿಪ್ರಗತಿಯಲ್ಲಿ ಸಂಪೂರ್ಣಗೊಳಿಸಬೇಕು, ಸಂಪೂರ್ಣಗೊಂಡ ಕೂಡಲೇ ತನಿಖಾ ವರದಿಯನ್ನು ಸಂಬಂಧಪಟ್ಟ ಮ್ಯಾಜಿಸ್ಟ್ರೇಟರುಗಳಿಗೆ ಸಲ್ಲಿಸತಕ್ಕದ್ದು ಎಂದು 173ನೇ ಪರಿಚ್ಛೇದ ಹೇಳುತ್ತದೆ. ಅಪರಾಧ ನಡೆದಿದ್ದಲ್ಲಿ ಯಾವ ರೀತಿಯ ಅಪರಾಧ ನಡೆದಿದೆ, ಅಪರಾಧಿ ಯಾರು ಎಂಬುದನ್ನು ಕಂಡುಕೊಳ್ಳುವ ನಿಟ್ಟಿನಲ್ಲಿ ತನಿಖೆಯು ನಿರ್ದೇಶಿಸಲ್ಪಡಬೇಕು. ತನಿಖೆ ಮುಗಿಯುವ ವೇಳೆಗೆ ಪೊಲೀಸ್ ಠಾಣೆಯ ಮುಖ್ಯಾಧಿಕಾರಿಗಳಿಗೆ ಸಾಕಷ್ಟು ಸಾಕ್ಷಿ ಪುರಾವೆಗಳಾಗಲೀ ಸೂಕ್ತವಾದ ಕಾರಣಗಳಾಗಲೀ ದೊರೆಯದಿದ್ದಲ್ಲಿ ಅನುಮಾನಿತ ಆರೋಪಿಯು ಮರಣದಂಡನೆಗಾಗಿ ಬಂಧನದಲ್ಲಿಡಲ್ಪಟ್ಟಿದ್ದಲ್ಲಿ ಅಂತಹವರನ್ನು ಬಿಡುಗಡೆಗೊಳಿಸಲು ನಿರ್ಧಾರ ಕೈಗೊಳ್ಳಬಹುದು. ಒಂದು ವೇಳೆ, ಆರೋಪಿಯನ್ನು ನ್ಯಾಯ ವಿಚಾರಣೆಗೆ ಒಳಪಡಿಸಲು ತಕ್ಕುದಾದ ಸಾಕ್ಷಿ ಪುರಾವೆಗಳಾಗಲೀ, ಸೂಕ್ತ ಕಾರಣಗಳಾಗಲೀ ಕಂಡುಬಂದಲ್ಲಿ ಸಂಹಿತೆಯ 170ನೇ ಪರಿಚ್ಛೇದದಲ್ಲಿ ಸೂಚಿಸಲಾಗಿರುವ ಕ್ರಮಗಳನ್ನು ಕೈಗೊಳ್ಳಬಹುದು. ಇವೆರಡೂ ಸಂದರ್ಭಗಳಲ್ಲೂ ತನಿಖೆ ಸಂಪೂರ್ಣಗೊಂಡ ಕೂಡಲೇ ಆತನು ಮ್ಯಾಜಿಸ್ಟ್ರೇಟರಿಗೆ ವರದಿ ಸಲ್ಲಿಸಬೇಕಾಗಿರುತ್ತದೆ. ಇಂತಹ ಪ್ರಕರಣಗಳ ತನಿಖಾ ವರದಿಗಳು ಮ್ಯಾಜಿಸ್ಟ್ರೇಟರಿಂದ ಕೂಲಂಕುಷವಾಗಿ ಪರಿಶೀಲಿಸಲ್ಪಡಬೇಕು. ಇದರಿಂದಾಗಿ ನ್ಯಾಯಾಲಯದ ಸಂಪೂರ್ಣ ಅಭಿಪ್ರಾಯವನ್ನು ಅನ್ವಯಗೊಳಿಸುವುದರ ಮೂಲಕ ನಿಷ್ಪಕ್ಷಪಾತವಾದ ತನಿಖೆ ನಡೆಸಲು ಮತ್ತು ಸಮರ್ಪಕವಾದ ಒಂದು ತೀರ್ಮಾನಕ್ಕೆ ಬರಲು ಸಾಧ್ಯವಾಗುತ್ತದೆ. ವರದಿಯನ್ನು ಗಮನಿಸಿದ ಮ್ಯಾಜಿಸ್ಟ್ರೇಟರು ಅದನ್ನು ಸ್ವೀಕರಿಸಲೂ ಬಹುದು ಅಥವಾ ಅದರಲ್ಲಿನ ತೀರ್ಮಾನಗಳನ್ನು ಒಪ್ಪಿಕೊಳ್ಳದೆ ಸಂಹಿತೆಯ 173 (8)ನೇ ಪರಿಚ್ಛೇದದಲ್ಲಿ ಅವಕಾಶ ನೀಡಲಾಗಿರುವಂತೆ ಮತ್ತೊಂದು ತನಿಖೆಗೆ ಆದೇಶಿಸಬಹುದು. ಮ್ಯಾಜಿಸ್ಟ್ರೇಟರು ಒಂದು ವೇಳೆ ವರದಿಯನ್ನು ಸ್ವೀಕರಿಸಿದ್ದೇ ಆದಲ್ಲಿ ಸಂಹಿತೆಯ 190ನೇ ಪರಿಚ್ಛೇದದ ಪ್ರಕಾರ ಅಪರಾಧ ನ್ಯಾಯ ವಿಚಾರಣೆಯ ಅಧಿಕಾರವನ್ನು ಕೈಗೆತ್ತಿಕೊಳ್ಳಬಹುದು.

27. ವಿಚಾರಣಾರ್ಹ ಅಪರಾಧವೊಂದು ನಡೆದಿರುವ ಮಾಹಿತಿ ದೊರೆತಾಗ ಪೊಲೀಸ್ ಠಾಣೆಯ ಮುಖ್ಯಾಧಿಕಾರಿ ಅದರ ಬಗ್ಗೆ ತನ್ನ ಅಭಿಪ್ರಾಯವನ್ನು ಮಂಡಿಸುವಂತೆ 157 (1)ನೇ ಪರಿಚ್ಛೇದ ಇಚ್ಛಿಸುತ್ತದೆ. ವಿಚಾರಣಾರ್ಹ ಅಪರಾಧವೊಂದು ನಡೆದಿದೆ ಎಂದು ಅನುಮಾನಿಸಲು ಕಾರಣವಿದೆಯೇ ಎಂಬುದನ್ನು ಕಂಡುಕೊಳ್ಳಲು ಆತನಿಗೆ ಸುತ್ತಮುತ್ತಲಿನ ಸನ್ನಿವೇಶಗಳ ತನಿಖೆ ನಡೆಸುವ ಅಧಿಕಾರವನ್ನು ಪರಿಚ್ಛೇದ156 ನೀಡುತ್ತದೆ. ಆತ ತನಗೆ ದೊರೆತ ಮಾಹಿತಿಯನ್ನು ಸುಮ್ಮನೆ ಯಾಂತ್ರಿಕವಾಗಿ ಒಪ್ಪಿಕೊಳ್ಳಲು ಬರುವುದಿಲ್ಲ. ಚಕಮಕಿಯಲ್ಲಿ ಪೋಲೀಸರ ಗುಂಡೇಟಿನಿಂದಾಗಿ ಸಾವು ಸಂಭವಿಸಿದೆ ಎಂಬ ಸೂಚನೆಯಿರುವ ಮಾಹಿತಿ ದೊರೆತಾಗ ಮೇಲ್ನೋಟಕ್ಕೇ ಅದು

ಭಾರತೀಯ ದಂಡ ಸಂಹಿತೆ 299ನೇ ಪರಿಚ್ಛೇದದಲ್ಲಿ ಅಡಕವಾಗಿರುವ ಅಂಶಗಳಲ್ಲಿ ನಿರ್ವಚಿಸಲಾಗಿರುವಂತೆ ದೋಷಾಸ್ಪದ ನರಹತ್ಯೆಯಾಗುತ್ತದೆ. ಹೀಗೆ, ಸಂಹಿತೆಯ 157ನೇ ಪರಿಚ್ಛೇದವು ತನಿಖೆಯಾಗಬೇಕೆಂದು ಸೂಚಿಸುತ್ತದೆ. ಆತ್ಮ ರಕ್ಷಣೆಯ ಹಕ್ಕನ್ನು ಚಲಾಯಿಸುವ ಸಂದರ್ಭದಲ್ಲಿ ಅಥವಾ ಸಂಹಿತೆಯ 46ನೇ ಪರಿಚ್ಛೇದದಲ್ಲಿ ಕೊಡಮಾಡಿರುವ ಬಂಧಿಸುವ ಸಂದರ್ಭದಲ್ಲಿ ಚಲಾಯಿಸಬಹುದಾದ ಹಕ್ಕನ್ನು ಚಲಾಯಿಸುವ ಸಂದರ್ಭದಲ್ಲಿ ಸಾವು ಸಂಭವಿಸಿತು ಆದ್ದರಿಂದ ಇದು ಅಪರಾಧವಲ್ಲ ಎಂಬ ಪ್ರತಿವಾದಿಯ ಯಾವುದೇ ಬಗೆಯ ಹೇಳಿಕೆಯು ಸತ್ಯಾಂಶಗಳ ಹಾಗೂ ಸನ್ನಿವೇಶಗಳ ತನಿಖೆಯ ನಂತರವಷ್ಟೇ ಒಪ್ಪಿಕೊಳ್ಳತಕ್ಕಂಥವುಗಳಾಗಿರುತ್ತವೆ. ಸ್ವಂತ ದೇಹ ರಕ್ಷಣೆಯ ಹಕ್ಕನ್ನು ಚಲಾಯಿಸುವ ಸಂದರ್ಭದಲ್ಲಿ ಅಕಸ್ಮಾತ್ತಾಗಿ ಸಾವು ಸಂಭವಿಸಿಬಿಡುವ ಮಿತಿಯವರೆಗೆ ಅದನ್ನು ಚಲಾಯಿಸಲು ಭಾರತೀಯ ದಂಡ ಸಂಹಿತೆ ಪರಿಚ್ಛೇದ 100ರಲ್ಲಿ ನಮೂದಿಸಲಾಗಿರುವ ಆರು ಅಂಶಗಳಲ್ಲಿ ಯಾವುದಾದರೊಂದು ಅಂಶಕ್ಕೆ ಅದು ಅನ್ವಯಿಸುವಂತಿದ್ದರೆ ಮಾತ್ರ ಅದಕ್ಕೆ ಅವಕಾಶವನ್ನು ಆ ಪರಿಚ್ಛೇದದಲ್ಲಿ ನೀಡಲಾಗಿದೆ.

ಪ್ರಕರಣವೊಂದು ಈ ಆರು ಅಂಶಗಳಲ್ಲಿ ಯಾವುದಾದರೊಂದು ಅಂಶದ ಕೆಳಗೆ ಬರುತ್ತದೆಯೇ ಎಂಬುದನ್ನು ಸಮರ್ಪಕವಾದ ತನಿಖೆಯ ಮೂಲಕ ಮಾತ್ರ ಖಚಿತವಾಗಿ ಹೇಳಲು ಸಾಧ್ಯವಾಗುತ್ತದೆ. ಅದೇ ರೀತಿಯಲ್ಲಿ ಪರಿಚ್ಛೇದ 46(3)ರಲ್ಲಿ ನೀಡಲಾಗಿರುವ ಅವಕಾಶದ ಅನುಸಾರ ಮೊರೆಯಿಡುವಾಗಲೂ ಹತ್ಯೆಗೀಡಾದ ವ್ಯಕ್ತಿಯ ಸಾವು ಪೋಲೀಸರು ಆತನನ್ನು ಬಂಧಿಸುವ ಪ್ರಯತ್ನವನ್ನು ಬಲವಾಗಿ ಆತ ವಿರೋಧಿಸಿದಾಗ ಸಂಭವಿಸಿತೇ ಅಥವಾ ಆತ ಮರಣ ದಂಡನೆಯ ಶಿಕ್ಷೆ ಅಥವಾ ಜೀವಾವಧಿಯ ಶಿಕ್ಷೆಯನ್ನು ಹೊಂದುವಂತಹ ಅಪರಾಧವನ್ನು ಎಸಗಿದ ಆರೋಪಿಯಾಗಿದ್ದನೇ ಎಂಬುದನ್ನು ಖಚಿತಪಡಿಸಿರಬೇಕಾಗುತ್ತದೆ. ಸ್ವಯಂ ರಕ್ಷಣೆಯ ಹಕ್ಕನ್ನು ಚಲಾಯಿಸುವಾಗ ಅಥವಾ ಸಂಹಿತೆಯ 46ನೇ ಪರಿಚ್ಛೇದದಲ್ಲಿ ನೀಡಲಾಗಿರುವ ಅಧಿಕಾರವನ್ನು ಚಲಾಯಿಸುವಾಗ ಈ ಎನ್‌ಕೌಂಟರ್ ಹತ್ಯೆ ಸಂಭವಿಸಿತು ಎಂದು ಪೊಲೀಸ್ ಅಧಿಕಾರಿಗಳು ಸಮರ್ಪಕವಾದ ತನಿಖೆ ನಡೆಯದ ಹೊರತು ಹೇಳುವ ಹಾಗಿಲ್ಲ. ಈ ಪ್ರಕರಣಗಳಲ್ಲಿ ಹತ್ಯೆಗೀಡಾದ ವ್ಯಕ್ತಿಯೊಬ್ಬ ಯಾವುದೇ ಬಗೆಯ ಅಪರಾಧ ಪ್ರಕರಣಗಳಲ್ಲಿ ಭಾಗಿಯಾದವನೇ ಅಲ್ಲ. ಆದ್ದರಿಂದ ಪರಿಚ್ಛೇದ 46ನ್ನು ಅನ್ವಯಿಸಿ ಈ ಪ್ರಕರಣದಲ್ಲಿ ಮೊರೆಯಿಡುವ ಹಾಗಿಲ್ಲ. ಒಬ್ಬ ವ್ಯಕ್ತಿಯು ಮತ್ತೊಬ್ಬ ವ್ಯಕ್ತಿಯಿಂದ ಹತ್ಯೆಗೀಡಾದನೆಂಬ ಮಾಹಿತಿಯನ್ನು ಪೊಲೀಸ್ ಠಾಣೆಯ ಮುಖ್ಯಾಧಿಕಾರಿ ಪಡೆದಾಗ ಸಾವಿಗೆ ಸ್ಪಷ್ಟ ಕಾರಣವನ್ನು ಕಂಡುಹಿಡಿಯಲು ತನಿಖೆ ನಡೆಸಿ ವರದಿಯನ್ನು ಜಿಲ್ಲಾ ಸಬ್ ಡಿವಿಶನಲ್ ಮ್ಯಾಜಿಸ್ಟ್ರೇಟರಿಗೆ ಸಲ್ಲಿಸತಕ್ಕದ್ದು. ಹಾಗೂ ಮೃತ ಶರೀರದ ಮರಣೋತ್ತರ ಪರೀಕ್ಷೆ ನಡೆಸಲು ವ್ಯವಸ್ಥೆ ಮಾಡತಕ್ಕದ್ದು ಎಂದು ಸಂಹಿತೆಯ 174ನೇ ಪರಿಚ್ಛೇದ ಹೇಳುತ್ತದೆ. ಅಸಹಜ ಸಾವನ್ನು ಪೋಲೀಸರು ಗಂಭೀರವಾಗಿ ಪರಿಗಣಿಸಬೇಕು ಹಾಗೂ ಸಾವಿಗೆ ನಿಜವಾದ ಕಾರಣವೇನೆಂಬುದನ್ನು ತನಿಖೆಯ ಮೂಲಕ ಅವರು ಕಂಡು ಹಿಡಿಯಬೇಕೆಂಬುದನ್ನು ಈ ಅವಕಾಶಗಳು ಸೂಚಿಸುತ್ತವೆ. ಪೋಲೀಸರೇ ಈ ಅಸಹಜ ಸಾವಿಗೆ ಕಾರಣವಾಗಿರುವಾಗ ಜವಾಬ್ದಾರಿ ಮತ್ತಷ್ಟು ಗುರುತರವಾದುದಾಗಿರುತ್ತದೆ. ಬಹುತೇಕ ಚಕಮಕಿಗಳು ಖೊಟ್ಟಿ ಚಕಮಕಿಗಳಾಗಿರುತ್ತವೆ ಎಂಬ ಅಭಿಪ್ರಾಯ ವ್ಯಾಪಕವಾಗಿದೆ. ಆದ್ದರಿಂದ ಇದರಲ್ಲಿ ಭಾಗಿಗಳಾಗಿದ್ದ ಪೋಲೀಸರ ನಡವಳಿಕೆಯನ್ನು ಸಾರ್ವಜನಿಕ ಹಿತಾಸಕ್ತಿಯ ದೃಷ್ಟಿಯಿಂದ ತನಿಖೆಯ ಮುಖಾಂತರ ಸಮರ್ಪಕವಾಗಿ

ಪರಿಶೀಲಿಸಬೇಕು. ತಪ್ಪುಗ್ರಹಿಕೆಯನ್ನು ಹೋಗಲಾಡಿಸಲು ಇಂತಹ ಪ್ರಕರಣಗಳನ್ನು ರಾಜ್ಯ CIDಯಂತಹ ಸ್ವತಂತ್ರ ಸಂಸ್ಥೆಗಳಿಗೆ ಸರ್ಕಾರದ ಸಾಮಾನ್ಯ ಆದೇಶದ ಮೂಲಕ ವಹಿಸಿ ಕೊಡತಕ್ಕದ್ದು. ಚಕಮಕಿಯೊಂದರಲ್ಲಿ ಪೊಲೀಸ್ ಅಧಿಕಾರಿಯ ನಿಮಿತ್ತ ಸಾವು ಸಂಭವಿದ ಮಾಹಿತಿಯು ಪೊಲೀಸ್ ಠಾಣೆಗೆ ದೊರೆತಾಗ, ಪೊಲೀಸ್ ಠಾಣೆಯ ಮೇಲಧಿಕಾರಿ ಆ ಮಾಹಿತಿಯನ್ನು ದಾಖಲಿಸಿದ ನಂತರ, ಅಪರಾಧ ನಡೆದಿರಬಹುದೆಂದು ಅನುಮಾನಿಸಲು ಕಾರಣವಿದೆಯೆಂದು ಊಹಿಸಿ, ಸಂಹಿತೆಯ 157ನೇ ಪರಿಚ್ಛೇದದಲ್ಲಿ ಸೂಚಿತವಾಗಿರುವುದಕ್ಕೆ ಅನುಸಾರವಾಗಿ ತನಿಖೆ ನಡೆಸಲು ಕ್ರಮ ಕೈಗೊಳ್ಳಬೇಕು. ಒಂದು ವೇಳೆ ಅಂತಹ ಒಂದು ಕ್ರಮವನ್ನು ಅನುಸರಿಸದೇ ಹೋದಲ್ಲಿ, ಪೋಲೀಸರು ದಂಡನೆಯ ಭಯವಿಲ್ಲದೆ ಯಾವುದೇ ನಾಗರಿಕನನ್ನು ಚಕಮಕಿಯ ಹೆಸರಿನಲ್ಲಿ ಕೇವಲ ಸ್ವಯಂ ರಕ್ಷಣೆಯ ಹಕ್ಕು ಚಲಾಯಿಸುವಾಗ ಅಥವಾ ಸಂಹಿತೆಯ ಪರಿಚ್ಛೇದ 46ರ ಕೆಳಗೆ ನೀಡಲಾಗಿರುವ ಅವಕಾಶದ ಅನುಸಾರ ಹಾಗೆ ಮಾಡಿದೆ ಎನ್ನಲು ಪೋಲೀಸರಿಗೆ ಪರವಾನಗಿ ನೀಡಿದಂತಾಗುತ್ತದೆ. ನ್ಯಾಯಯುತವಲ್ಲದ, ಸರಿಯಲ್ಲದ ಹಾಗೂ ಸೂಕ್ತವಲ್ಲದ ಪರಿಣಾಮಗಳನ್ನು ಉಂಟು ಮಾಡುವ ಇಂತಹ ಕ್ರಮವೊಂದು ಸಂವಿಧಾನದ ಪರಿಚ್ಛೇದ 21ರಲ್ಲಿ ಎಗ್ಗಿಲ್ಲದೆ ಮುಂದುವರೆಯಲು ಎಡೆಕೊಡಬಾರದು.

28. ಈ ಪ್ರಕರಣಗಳಿಗೆ ಸಂಬಂಧಿಸಿದಂತೆ, ಚಕಮಕಿ ನಡೆದ ಸಂದರ್ಭದಲ್ಲಿ ಇದು ಸಂಭವಿಸಿತು ಎಂಬುದು ಪೋಲೀಸರ ನಿಲುವಾಗಿದೆ. PWGಯವರೆಂದು ಹೇಳಲಾದ ಹಲವು ವ್ಯಕ್ತಿಗಳು ಪೋಲೀಸರ ಗುಂಡಿಗೆ ಬಲಿಯಾದರೆ ಪೋಲೀಸರು ಮಾತ್ರ ಯಾವುದೇ ಒಂದು ಸಣ್ಣ ಗಾಯದ ನೋವನ್ನೂ ಅನುಭವಿಸಿಲ್ಲ. ಚಕಮಕಿಯಲ್ಲಿ ಭಾಗಿಯಾಗುವ ಪೊಲೀಸ್ ತಂಡದ ನಾಯಕ ನೀಡುವ ಮಾಹಿತಿಯ ಆಧಾರದ ಮೇಲೆ ಆಯಾ ಪೊಲೀಸ್ ಠಾಣೆಗಳಲ್ಲಿ ಅದನ್ನು ಹಾಗೆಯೇ ನಮೂದಿಸಲಾಗಿರುತ್ತದೆ. ಅದರಲ್ಲಿ, ಹತ್ಯೆಯಾದ ವ್ಯಕ್ತಿಗಳು ಪೋಲೀಸರನ್ನು ಹತ್ಯೆಗೈಯಲು ಪ್ರಯತ್ನಿಸಿದ್ದರು, ಆದ್ದರಿಂದ, ಅಪರಾಧ ದಂಡ ಸಂಹಿತೆ 307ನೇ ಪರಿಚ್ಛೇದದ ಪ್ರಕಾರ ಕೊಲೆಯ ಯತ್ನ ನಡೆಸಿದ ಅಪರಾಧಿಗಳು ಅವರು ಎಂದು ಆಪಾದಿಸಲಾಗಿರುತ್ತದೆ. ಅದರ ಆಧಾರದ ಮೇಲೆ ಪೋಲೀಸರು ಅವರನ್ನು ಅಪರಾಧಿಗಳೆಂದು ಬಣ್ಣಿಸಿ ಪ್ರಥಮ ಮಾಹಿತಿ ವರದಿಗಳನ್ನು ಸಿದ್ಧಪಡಿಸುತ್ತಾರೆ. ಆಪಾದಿತರು ಸಾವಿಗೀಡಾಗುವುದರಿಂದ ಈ ಪ್ರಕರಣಗಳು ಕಾನೂನಿನಲ್ಲಿ ರದ್ದಾಗಿ ಯಾವುದೇ ತನಿಖೆಯಿಲ್ಲದಂತೆ ಅವು ಮುಚ್ಚಿ ಹೋಗುತ್ತವೆ. ಈ ಹತ್ಯೆಗಳಿಗೆ ಪೊಲೀಸ್ ಅಧಿಕಾರಿಗಳೇ ಕಾರಣರಾಗಿದ್ದಾರೆ ಎಂಬುದನ್ನು ಖಚಿತಪಡಿಸುವಂತಹ ಯಾವುದೇ ಬಗೆಯ ಪ್ರಯತ್ನಗಳು ನಡೆದಿರುವುದಿಲ್ಲ ಆದ್ದರಿಂದ ಒಂದು ವೇಳೆ ಕಾನೂನಿನನ್ವಯ ಶಿಕ್ಷಾರ್ಹವಾದ ಯಾವುದೇ ಅಪರಾಧವನ್ನು ಅವರಲ್ಲಿ ಯಾರೊಬ್ಬರೂ ಎಸಗಿಲ್ಲ ಎಂದಾಗುತ್ತದೆ. ಸ್ವಯಂ ರಕ್ಷಣೆ ಮಾಡಿಕೊಳ್ಳುವ ಉದ್ದೇಶದಿಂದ ಹಾಗೆ ಮಾಡಿದ್ದೇ ಹೊರತು ತಾವು ಯಾವುದೇ ಅಪರಾಧ ಎಸಗಿಲ್ಲ ಎಂಬುದು ನಮ್ಮ ಮುಂದೆ ಪೋಲೀಸರ ವಾದವಾಗಿತ್ತು. ಕೆಲವು ಪ್ರಕರಣಗಳಲ್ಲಿ, ಅಪರಾಧ ದಂಡ ಸಂಹಿತೆಯ 46 (3)ನೇ ಪರಿಚ್ಛೇದದಲ್ಲಿ ನೀಡಲಾಗಿರುವ ಅವಕಾಶವನ್ನು ಮುಂದಿರಿಸಿಕೊಂಡು ಹತ್ಯೆಗಳಿಗೆ ಸಮರ್ಥನೆ ಕೊಟ್ಟುಕೊಳ್ಳಲಾಯಿತು. ಪೊಲೀಸ್ ಠಾಣೆಯಲ್ಲಿ ಮಾಹಿತಿಯನ್ನು ದಾಖಲಿಸಲಾಗಿದೆ ಎಂದು ಭಾವಿಸಿಕೊಂಡಿರುವುದರ ಮೇಲೆ ಹೀಗೆ ಮಾಡಲಾಗಿದೆ. ನಡೆಯಿತೆಂದು ಹೇಳಲಾಗುವ ಚಕಮಕಿಯನ್ನು ಮುನ್ನಡೆಸಿದ ಅದೇ ಪೊಲೀಸ್ಅಧಿಕಾರಿ ನೀಡಿದ ಮಾಹಿತಿಯನ್ನೇ ಪೊಲೀಸ್ ಠಾಣೆಗಳಲ್ಲಿ ಬಹುತೇಕ ಪ್ರಕರಣಗಳಲ್ಲಿ ದಾಖಲಿಸಲಾಗಿದೆ. ಪೊಲೀಸ್ ಠಾಣೆಗಳಲ್ಲಿ ಮಾಹಿತಿ ಸ್ವೀಕರಿಸುವಾಗ ಹತ್ಯೆಗೀಡಾದವರ ನಡವಳಿಕೆಯೆಡೆಗೆ ಮಾತ್ರ ಗಮನ ನೀಡಲಾಗಿದೆಯೇ

ಹೊರತು ಸಾವಿಗೆ ನಿಮಿತ್ತವಾದ ಪೋಲೀಸರ ನಡವಳಿಕೆಗೆ ಗಮನ ನೀಡಲಾಗಿಲ್ಲ. ನಡೆಯಿತೆನ್ನಲಾದ ಚಕಮಕಿಯಲ್ಲಿ ಸಾವು ಸಂಭವಿಸಲು ನಿಮಿತ್ತವಾದ ಪೋಲೀಸರು ಗುಂಡು ಹಾರಿಸಿರುವುದನ್ನು ಆತ್ಮ ರಕ್ಷಣೆಯ ಹಕ್ಕನ್ನು ಚಲಾಯಿಸುವ ಹೆಸರಿನಲ್ಲಿ ಅಥವಾ 46ನೇ ಪರಿಚ್ಛೇದದಲ್ಲಿ ನೀಡಲಾಗಿರುವ ಬಂಧಿಸುವ ಹಕ್ಕಿಗೆ ಅನುಸಾರವಾಗಿ ಸಮರ್ಥಿಸಿಕೊಳ್ಳಲಾಗುತ್ತದೆ. ಹಲವಾರು ಜನರ ಸಾವಿಗೆ ನಿಮಿತ್ತವಾಗುವಂತೆ ಪೋಲೀಸರು ಯಾವ ಸನ್ನಿವೇಶದಲ್ಲಿ ಗುಂಡು ಹಾರಿಸಬೇಕಾಯಿತು ಎಂಬುದರ ತನಿಖೆಗೆ ಯಾವುದೇ ಪ್ರಯತ್ನ ನಡೆದಿರುವುದಿಲ್ಲ. ಈ ಪ್ರಕರಣದಲ್ಲಿ ಅನುಸರಿಸಲಾಗಿರುವ ಕ್ರಮ ಕಾನೂನಿನ ಅನುಮೋದನೆ ಹೊಂದಿರುವುದಿಲ್ಲ. ಮಾತ್ರವಲ್ಲದೆ, ಸಂಹಿತೆಯಲ್ಲಿ ತಿಳಿಸಲಾಗಿರುವ ಕ್ರಮಕ್ಕೆ ಇದು ವಿರುದ್ಧವಾದುದಾಗಿದೆ. ಇದು ಅನ್ಯಾಯದಿಂದ ಕೂಡಿದ, ತಪ್ಪಾದ ಹಾಗೂ ಅಸಮರ್ಪಕವಾದ ಕ್ರಮವಾಗಿರುವುದರಿಂದ ಇದು ಸಂವಿಧಾನದ 21ನೇ ಪರಿಚ್ಛೇದದಲ್ಲಿ ಭರವಸೆ ನೀಡಲಾಗಿರುವ ಮೂಲಭೂತ ಹಕ್ಕನ್ನು ಉಲ್ಲಂಘಿಸುತ್ತದೆ.

29. ಮೇಲೆ ಹೇಳಲಾಗಿರುವ ಕಾರಣಗಳಿಗಾಗಿ ನಾವು ಈ ಕೆಳಗಿನಂತೆ ಶಿಫಾರಸ್ಸು ಮಾಡುತ್ತೇವೆ:

   i) ವಿಚಾರಣಾರ್ಹ ಅಪರಾಧ ನಡೆದಿದೆ ಎಂದು ಅನುಮಾನಿಸಲು ಇಲ್ಲಿನ ಪ್ರತಿಯೊಂದು ಪ್ರಕರಣದಲ್ಲಿ ಆಯಾ ಪೊಲೀಸ್ ಠಾಣೆಗಳ ಪೊಲೀಸ್ ಮುಖ್ಯಾಧಿಕಾರಿಗಳಿಗೆ ಒದಗಿಸಲಾಗಿರುವ ಮಾಹಿತಿಯಷ್ಟೇ ಸಾಕಾಗುತ್ತದೆ. ಈ ಆದೇಶದಲ್ಲಿ ಸ್ಪಷ್ಟಪಡಿಸಲಾಗಿರುವುದರ ಬೆಳಕಿನಲ್ಲಿ ಪಿಡಬ್ಲ್ಯೂಗಳ ಸಾವಿಗೆ ಕಾರಣವಾದ ವಾಸ್ತವಿಕ ಸಂಗತಿಗಳ ಹಾಗೂ ಸನ್ನಿವೇಶಗಳ ತನಿಖೆಗೆ ಶೀಘ್ರ ಕ್ರಮ ಕೈಗೊಳ್ಳತಕ್ಕದ್ದು.

   ii) ಈ ಪ್ರಕರಣಗಳಲ್ಲಿ, ಇಲ್ಲಿನ ಪೋಲೀಸರು ತಾವೇ ಚಕಮಕಿಯನ್ನು ನಡೆಸಿರುವುದರಿಂದ ತನಿಖೆಯನ್ನು ಇತರ ಯಾವುದೇ ಅಂದರೆ, ಆದ್ಯತೆ ಮೇರೆಗೆ ರಾಜ್ಯ ಸಿಐಡಿಯಂತಹ ತನಿಖಾ ಸಂಸ್ಥೆಗೆ ಈ ಪ್ರಕರಣಗಳನ್ನು ವರ್ಗಾಯಿಸುವುದು ಸೂಕ್ತ. ಈಗಾಗಲೇ ಸಾಕಷ್ಟು ಸಮಯ ವ್ಯಯವಾಗಿ ಹೋಗಿರುವುದರಿಂದ, ಇಂದಿನಿಂದ ನಾಲ್ಕು ತಿಂಗಳ ಒಳಗಾಗಿ ತನಿಖೆ ಸಂಪೂರ್ಣಗೊಳಿಸಬೇಕೆಂದು ನಾವು ಶಿಫಾರಸು ಮಾಡುತ್ತೇವೆ. ತನಿಖೆಯ ಫಲಿತಾಂಶವಾಗಿ ಕಾನೂನು ಕ್ರಮ ಜರುಗಿಸಬೇಕೆಂದಾದಲ್ಲಿ ಶೀಘ್ರವೇ ಮೊಕದ್ದಮೆಯ ವಿಚಾರಣೆ ನಡೆಸಲು ಕ್ರಮ ತೆಗೆದುಕೊಳ್ಳತಕ್ಕದ್ದು. ಶಿಕ್ಷಾ ವಿಧಿಗೆ ಒಳಪಟ್ಟ ಪ್ರಕರಣಗಳಲ್ಲಿ ಅವರಿಗೆ ಪರಿಹಾರ ಕೊಡಮಾಡಲಾಗುವುದೆಂದು ನಾವು ನಿರೀಕ್ಷಿಸುತ್ತೇವೆ.

   iii) ಗತಿಸಿದ ಶಂಕರಯ್ಯ (ಪ್ರಕರಣ ಸಂ.234(3)/93-94/ಎನ್‌ಎಚ್‌ಆರ್‌ಸಿ) ಇತ್ಯರ್ಥಗೊಳ್ಳದೆ ಉಳಿದಿರುವ ಯಾವುದೇ ಅಪರಾಧ ಪ್ರಕರಣದಲ್ಲಿ ಭಾಗಿಯಾದವನಲ್ಲವಾಗಿದ್ದು, ನಡೆಯಿತೆನ್ನಲಾದ ಚಕಮಕಿಯ ಪ್ರಕ್ರಿಯೆಯಲ್ಲಿ ಜೀವ ಕಳೆದುಕೊಳ್ಳಬೇಕಾಗಿ ಬಂದುದು ತೀರಾ ಅನ್ಯಾಯ. ಆತನಿಗೆ ಸಂಬಂಧಿಸಿದಂತೆ, ನಮ್ಮ ಅಭಿಪ್ರಾಯವೇನೆಂದರೆ - ಮಾನ್ಯ ಅಡ್ವೋಕೇಟ್ ಜನರಲ್ ನಮ್ಮ ಅಭಿಪ್ರಾಯಕ್ಕೆ ಸಮ್ಮತಿ ಸೂಚಿಸಿದ್ದಾರೆ. ರಾಜ್ಯ ಸರ್ಕಾರವು ಆತನ ವಿಧವೆಗೆ ಈಗಾಗಲೇ ಇಂತಹ ಪ್ರಕರಣಗಳಲ್ಲಿ ಮಾಡಿರುವಂತೆ 1ಲಕ್ಷ ರೂಪಾಯಿಗಳರ ಪರಿಹಾರ ನೀಡಬೇಕು. ಮಾತ್ರವಲ್ಲದೆ ಆತನನ್ನು ಹತ್ಯೆಗೈದ ಪೋಲೀಸರನ್ನು ತನಿಖೆಗೆ ಒಳಪಡಿಸಬೇಕು ಮತ್ತು ತನಿಖೆಯ ಫಲಿತಾಂಶಕ್ಕನುಸಾರವಾಗಿ ಮೊಕದ್ದಮೆಯ ವಿಚಾರಣೆ ನಡೆಸಬೇಕು.

iv) ತಮ್ಮ ನಡವಳಿಕೆಯಲ್ಲಿ ಬದಲಾವಣೆ ತಂದುಕೊಂಡು ಕಾನೂನಿನ ಸ್ಥಿತಿಯನ್ನು ಗಮನದಲ್ಲಿರಿಸಿಕೊಂಡು ತಮ್ಮ ಕಾರ್ಯಾಚರಣೆಗಳನ್ನು ಅದಕ್ಕೆ ತಕ್ಕಂತೆ ಅಳವಡಿಸಿಕೊಳ್ಳುವಂತೆ ತಮ್ಮ ಇಲಾಖೆಯಲ್ಲಿ ಪ್ರಜ್ಞೆ ಮೂಡಿಸುವರೆಂದು ರಾಜ್ಯ ಪೋಲೀಸರನ್ನು ನಾವು ಶ್ಲಾಘಿಸುತ್ತೇವೆ.

ನಾವೀಗ ಹೇಳಿರುವುದಕ್ಕೆ ವ್ಯತಿರಿಕ್ತವಾಗಿ ಅದೇ ನಡವಳಿಕೆ ಮುಂದುವರೆದಲ್ಲಿ ಮುಂದೆ ಪರಿಹಾರ ಧನವ ಮೊತ್ತ ಸಂದರ್ಭಾನುಸಾರ ಹೆಚ್ಚಾಗಬೇಕಾಗುತ್ತದೆ ಹಾಗೂ ಸನ್ನಿವೇಶದ ಬಗ್ಗೆ ಶಿಸ್ತಿನ ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ. ಈ ನಡವಳಿಕೆಯು ಹಲವು ವರ್ಷಗಳಿಂದ ವಾಡಿಕೆಯಲ್ಲಿರುವುದು ಹಾಗೂ ಜನರು ಇಂತಹ ಸನ್ನಿವೇಶಗಳನ್ನು ಮರೆತುಬಿಡುತ್ತಾರೆನ್ನುವ ಸತ್ಯಾಂಶದ ಅರಿವಿರುವುದರಿಂದ ನಾವು ಸದ್ಯಕ್ಕೆ ತಾತ್ಕಾಲಿಕ ಪರಿಹಾರವನ್ನು ಕುರಿತು ಚಿಂತಿಸುತ್ತಿಲ್ಲ.

30. ನಮ್ಮ ಶಿಫಾರಸುಗಳನ್ನು ತಡಮಾಡದೆ ರಾಜ್ಯ ಸರ್ಕಾರದ ಸ್ವೀಕಾರಕ್ಕಾಗಿ ಸಲ್ಲಿಸುವಂತೆ ಕೋರಲಾಗಿದೆ ಹಾಗೂ ಪಡೆದ ಪ್ರತಿಕ್ರಿಯೆಯ ಸೂಚನೆಗಾಗಿ 30 ದಿನಗಳ ಕಾಲಾವಕಾಶ ನೀಡಲಾಗಿದೆ.

31. ಆಯೋಗಕ್ಕೆ ನೆರವಾಗುವಂತೆ ಸಲ್ಲಿಸಲಾಗಿದ್ದ ನಮ್ಮ ಕೋರಿಕೆಗೆ ಸ್ಪಂದಿಸಿದ ಸಾಲಿಸಿಟರ್ ಜನರಲ್‌ರವರಿಗೆ ನಾವು ಕೃತಜ್ಞರಾಗಿದ್ದೇವೆ. ಕಕ್ಷಿದಾರರ ಪರ ವಕಾಲತ್ತು ವಹಿಸಲು ನೆರವಾದ ವಕೀಲರಿಗೆ ನಮ್ಮ ಮೆಚ್ಚುಗೆಯನ್ನು ನಾವು ದಾಖಲಿಸುತ್ತೇವೆ.

ಸಹಿ/-
**(ರಂಗನಾಥ ಮಿಶ್ರಾ)**
ಅಧ್ಯಕ್ಷರು

ಸಹಿ/-
**(ಎಮ್. ಫಾತಿಮಾ ಬೀವಿ)**
ಸದಸ್ಯರು

ಸಹಿ/-
**(ವಿ. ಎಸ್. ಮಳೀಮಠ್)**
ಸದಸ್ಯರು

ನವೆಂಬರ್ 5, 1996

# ಪೊಲೀಸ್ ಲಾಕಪ್‌ಗಳ ಭೇಟಿ/ ಪೋಲಿಗ್ರಾಫ್ ಪರೀಕ್ಷೆ ಹಾಗೂ ಬಂಧನವನ್ನು ಕುರಿತ ಮಾರ್ಗಸೂಚಿ

## ಎನ್‌ಎಚ್‌ಆರ್‌ಸಿ ಅಧಿಕಾರಿಗಳ ಪೊಲೀಸ್ ಲಾಕಪ್‌ಗಳ ಭೇಟಿ ಕುರಿತಂತೆ ಎಲ್ಲ ರಾಜ್ಯಗಳ/ಕೇಂದ್ರ ಶಾಸಿತ ಪ್ರದೇಶಗಳ ಮುಖ್ಯ ಕಾರ್ಯದರ್ಶಿಗಳು/ಆಡಳಿತಾಧಿಕಾರಿಗಳಿಗೆ ಬರೆದ ಪತ್ರ

ಆರ್. ವಿ. ಪಿಳ್ಳೈ

ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ
ಮಹಾ ಕಾರ್ಯದರ್ಶಿಗಳು
ಸರ್ದಾರ್ ಪಟೇಲ್ ಭವನ
ಸಂಸದ್ ಮಾರ್ಗ
ನವದೆಹಲಿ -೧೧೦ ೦೦೧

ಡಿಓ ಸಂ.15(13)/97-ಸಿಓಓಆರ್‌ಡಿ
1ನೇ ಆಗಸ್ಟ್ 1997

ಆತ್ಮೀಯರಾದ ಶ್ರೀ.............

ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಶಾಸನಬದ್ಧ ಹೊಣೆಗಾರಿಕೆಗಳ ವ್ಯಾಪ್ತಿಯಲ್ಲಿ ಬರುವ ವಿವಿಧ ಕೆಲಸ ಕಾರ್ಯಗಳನ್ನು ಕುರಿತು ಅದು ಹೊರಡಿಸಿರುವ ನಿರ್ದೇಶನಕ್ಕೆ ಅನುಸಾರವಾಗಿ ಆಯೋಗದ ಅಧಿಕಾರಿಗಳು ವಿವಿಧ ರಾಜ್ಯಗಳನ್ನು ಭೇಟಿ ಮಾಡಲಿರುವರು.

2. ವಿವಿಧ ರಾಜ್ಯಗಳಲ್ಲಿನ ಪೊಲೀಸ್ ಲಾಕಪ್‌ಗಳ ಸ್ಥಿತಿಗತಿಯ ಕುರಿತಂತೆ ಆಯೋಗವು ವರದಿಗಳನ್ನು ಪಡೆದಿರುವ ಹಿನ್ನೆಲೆಯಲ್ಲಿ ಎನ್‌ಎಚ್‌ಆರ್‌ಸಿಯ ಅಧಿಕಾರಿಗಳ ರಾಜ್ಯಗಳ ಭೇಟಿಯ ಸಂದರ್ಭದಲ್ಲಿ ಅವರು ಪೋಲೀಸ್‌ರ ಲಾಕಪ್‌ಗಳಿಗೆ ಭೇಟಿ ನೀಡಲು ಸಾಧ್ಯವಾಗುವಂತೆ ಅಧಿಕಾರಿಗಳಿಗೆ ಅನುಮತಿ ನೀಡುವಂತೆ ರಾಜ್ಯ ಸರ್ಕಾರಗಳನ್ನು ಕೋರಿದೆ.
3. ಆ ಪ್ರಕಾರವಾಗಿ, ನಿಮ್ಮ ರಾಜ್ಯಕ್ಕೆ ಭೇಟಿ ನೀಡುವ ಎನ್‌ಎಚ್‌ಆರ್‌ಸಿಯ ಅಧಿಕಾರಿಗಳು ಪೊಲೀಸ್ ಲಾಕಪ್‌ಗಳ ಭೇಟಿಯನ್ನು ಕೂಡ ನಡೆಸಲು ಅನುವಾಗುವಂತೆ ಅಗತ್ಯ ಸೂಚನೆಗಳನ್ನು ಹೊರಡಿಸಬೇಕೆಂದು ತಮ್ಮನ್ನು ಕೋರುತ್ತೇನೆ.
4. ಸೂಚನೆಗಳನ್ನು ನೀಡಲಾಗಿದೆಯೇ ಎಂಬುದರ ಕುರಿತು ಒಂದೆರಡು ಸಾಲಿನಲ್ಲಿ ಬರೆದು ದೃಢೀಕರಿಸಿದಲ್ಲಿ ಅದನ್ನು ಬಹುವಾಗಿ ಶ್ಲಾಘಿಸುತ್ತೇವೆ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ,
ಸಹಿ/-
(ಆರ್. ವಿ. ಪಿಳ್ಳೈ)

ರಿಗೆ,

ಎಲ್ಲ ರಾಜ್ಯಗಳ/ಕೇಂದ್ರ ಶಾಸಿತ ಪ್ರದೇಶಗಳ ಮುಖ್ಯ ಕಾರ್ಯದರ್ಶಿಗಳು/ಆಡಳಿತಾಧಿಕಾರಿಗಳು

# ಬಂಧನಕ್ಕೆ ಸಂಬಂಧಿಸಿದಂತೆ ಎನ್‌ಎಚ್‌ಆರ್‌ಸಿ ಮಾರ್ಗಸೂಚಿಗಳು

**ಡಿ. ಆರ್. ಕಾರ್ತಿಕೇಯನ್**
ಮಹಾ ನಿರ್ದೇಶಕರು

ಸಂ.7/11/99-ಪಿಆರ್‌ಪಿ&ಪಿ
**ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ**
22ನೇ ನವೆಂಬರ್, 1999

ರಿಗೆ,

ಎಲ್ಲ ರಾಜ್ಯಗಳ/ಕೇಂದ್ರ ಶಾಸಿತ ಪ್ರದೇಶಗಳ ಮುಖ್ಯ ಕಾರ್ಯದರ್ಶಿಗಳಿಗೆ

ಮಾನ್ಯರೇ,

ಎಲ್ಲ ಅಂಶಗಳು ಒಳಗೊಂಡಿವೆ ಎಂಬುದನ್ನು ಸ್ಪಷ್ಟಪಡಿಸಿಕೊಂಡ ಮೇಲೆ, ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು "ಬಂಧನ"ವನ್ನು ಕುರಿತು ಕೆಲವು ಮಾರ್ಗಸೂಚಿಗಳನ್ನು ಅಂಗೀಕರಿಸಿದೆ.

ಆಯೋಗವು ಅನುಮತಿಸಿದ ಮಾರ್ಗಸೂಚಿಗಳನ್ನೊಳಗೊಂಡ ಟಿಪ್ಪಣಿಯೊಂದನ್ನು ಈ ಪತ್ರದೊಂದಿಗೆ ಲಗತ್ತಿಸಲಾಗಿದೆ. ಈ ಮಾರ್ಗಸೂಚಿಗಳನ್ನು ತಮ್ಮ ತಮ್ಮ ಪ್ರಾದೇಶಿಕ ಭಾಷೆಗಳಲ್ಲಿ ಭಾಷಾಂತರಗೊಳಿಸಿ ಎಲ್ಲ ಪೊಲೀಸ್ ಅಧಿಕಾರಿಗಳಿಗೆ ಎಲ್ಲ ಪೊಲೀಸ್ ಠಾಣೆಗಳಲ್ಲಿ ಲಭ್ಯವಾಗುವಂತೆ ಮಾಡಬೇಕೆಂದು ಆಯೋಗವು ಕೋರಿದೆ.

ಪೊಲೀಸ್ ಠಾಣೆಗಳನ್ನು ಭೇಟಿ ಮಾಡುವ ಹಿರಿಯ ಅಧಿಕಾರಿಗಳು ಇಂತಹ ಮಾರ್ಗಸೂಚಿಗಳು ಸಂಬಂಧಪಟ್ಟ ಪೊಲೀಸ್ ಅಧಿಕಾರಿಗಳ ಬಳಿ ಹಾಗೂ ಪೊಲೀಸ್ ಠಾಣೆಗಳಲ್ಲಿ ಲಭ್ಯವಿದೆಯೇ, ಅದರ ಅನುಸರಣೆ ನಡೆದಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳಬೇಕು.

ತಮ್ಮ ವಿಶ್ವಾಸಿ,

ಸಹಿ/-

**(ಡಿ. ಆರ್. ಕಾರ್ತಿಕೇಯನ್)**

ಪ್ರತಿ,

1. ಎಲ್ಲ ರಾಜ್ಯಗಳ/ಕೇಂದ್ರ ಶಾಸಿತ ಪ್ರದೇಶಗಳ ಗೃಹ ಕಾರ್ಯದರ್ಶಿಗಳು
2. ಎಲ್ಲ ರಾಜ್ಯಗಳ ಪೊಲೀಸ್ ಮಹಾ ನಿರ್ದೇಶಕರುಗಳು

**ಅಡಕ: ಮೇಲೆ ತಿಳಿಸಲಾಗಿರುವಂತೆ**

# ಬಂಧನಕ್ಕೆ ಸಂಬಂಧಿಸಿದ ಆಯೋಗದ ಮಾರ್ಗಸೂಚಿಗಳು

## ಮಾರ್ಗಸೂಚಿಗಳ ಅವಶ್ಯಕತೆ

ಬಂಧನವು ಬಂಧಿತನಾದ ವ್ಯಕ್ತಿಯ ಸ್ವಾತಂತ್ರ್ಯವನ್ನು ಇಲ್ಲವಾಗಿಸುತ್ತದೆ, ಆದ್ದರಿಂದ, ಅದು ಸ್ವಾತಂತ್ರ್ಯವೆಂಬ ಮೂಲಭೂತ ಮಾನವ ಹಕ್ಕನ್ನು ಉಲ್ಲಂಘಿಸುತ್ತದೆ. ಭಾರತದ ಸಂವಿಧಾನ ಮಾತ್ರವಲ್ಲದೆ ಅಂತರರಾಷ್ಟ್ರೀಯ ಮಾನವ ಹಕ್ಕುಗಳ ಕಾನೂನು ಕೂಡ ಪ್ರಭುತ್ವವು ಕಾನೂನು ಸುವ್ಯವಸ್ಥೆಯನ್ನು ಕಾಪಾಡುವ ತನ್ನ ಪ್ರಾಥಮಿಕ ಪಾತ್ರ ನಿರ್ವಹಣೆಯ ಭಾಗವಾಗಿ ಯಾವುದೇ ವ್ಯಕ್ತಿಯನ್ನು ಬಂಧಿಸುವ ಅಧಿಕಾರವನ್ನು ಹೊಂದಿದೆ ಎಂಬುದನ್ನು ಗುರುತಿಸುತ್ತದೆ. ಸಂವಿಧಾನವು ಕಾನೂನು ಪ್ರಕಾರ ಸ್ಥಾಪನೆಗೊಂಡ ನ್ಯಾಯಬದ್ಧವಾದ, ಸರಿಯಾದ ಹಾಗೂ ಸೂಕ್ತವಾದ ಕ್ರಮಗಳ ಮೂಲಕ ಮಾತ್ರ ಇಂತಹ ಸ್ವಾಂತಂತ್ರ್ಯ ಹಾನಿಗೆ ಅವಕಾಶವೀಯುತ್ತದೆ.

ಆದರೂ, ಸಂವಿಧಾನದ ಪರಿಚ್ಛೇದ 22(1)ರಲ್ಲಿ ಬಂಧನಕ್ಕೆ ಒಳಗಾದ ವ್ಯಕ್ತಿಗೆ ಸಾಧ್ಯವಾದಷ್ಟು ಬೇಗ ಆತನ ಬಂಧನಕ್ಕೆ ಕಾರಣವೇನು ಎಂಬುದನ್ನು ತಿಳಿಸಬೇಕು. ಹಾಗೂ ತನ್ನ ಆಯ್ಕೆಯ ವಕೀಲರನ್ನು ಭೇಟಿಯಾಗುವ ಮತ್ತು ಅವರ ಮೂಲಕ ರಕ್ಷಣೆ ಪಡೆಯುವ ಅವಕಾಶವನ್ನು ತಿರಸ್ಕರಿಸಕೂಡದು. ಅಪರಾಧ ದಂಡ ಸಂಹಿತೆಯ (1973) ಪರಿಚ್ಛೇದ 50ರ ಪ್ರಕಾರ ಯಾವುದೇ ವ್ಯಕ್ತಿಯನ್ನು ಪೊಲೀಸ್ ಅಧಿಕಾರಿಯೊಬ್ಬ ಬಂಧಿಸಿದಾಗ "ಯಾವ ಆಪಾದನೆಗಾಗಿ ಬಂಧಿಸಲಾಗಿದೆ ಎಂಬುದರ ಸಂಪೂರ್ಣ ವಿವರವನ್ನು ಅಥವಾ ಅಂತಹ ಬಂಧನಕ್ಕೆ ಇರುವ ಇತರ ಮೂಲ ಕಾರಣಗಳನ್ನು ಆತನಿಗೆ ನೀಡಬೇಕು. ಆದರೆ ವಾಸ್ತವವಾಗಿ ಇಂತಹ ಕ್ರಮಗಳನ್ನು ಅತಿಕ್ರಮಿಸುವುದೇ ಹೆಚ್ಚು.

ಅದರಂತೆಯೇ, ಸಂವಿಧಾನದ [ಪರಿಚ್ಛೇದ 22(2)] ಹಾಗೂ ಅಪರಾಧ ದಂಡ ಸಂಹಿತೆ (ಪರಿಚ್ಛೇದ 57)ರಲ್ಲಿ ಕಡ್ಡಾಯಗೊಳಿಸಲಾಗಿರುವಂತೆ ಬಂಧಿತ ವ್ಯಕ್ತಿಯನ್ನು ಒಡನೆಯೇ ನ್ಯಾಯಾಲಯದ ಮುಂದೆ ಹಾಜರುಪಡಿಸಬೇಕೆಂಬ ಅವಕಾಶವನ್ನು ಕೂಡ ಶಿಸ್ತಿನಿಂದ ಅನುಸರಿಸಲಾಗುತ್ತಿಲ್ಲ.

ಮಾನವ ಹಕ್ಕುಗಳ ಉಲ್ಲಂಘನೆಗೆ ಸಂಬಂಧಿಸಿದ ಬಹುತೇಕ ದೂರುಗಳು ವಿಶೇಷವಾಗಿ, ಬಂಧನ ಮತ್ತು ಶಿಕ್ಷಿಸುವುದಕ್ಕಾಗಿ ಇರಿಸಿ ಬಂಧನಕ್ಕೆ ಸಂಬಂಧಿಸಿದಂತೆ ಪೋಲೀಸರ ಅಧಿಕಾರ ದುರ್ಬಳಕೆಗೆ ಸಂಬಂಧಿಸಿದ್ದಾಗಿರುತ್ತದೆ. ಕಾನೂನು ಮತ್ತು ಆಚರಣೆಗಳ ನಡುವಿನ ಅಂತರವನ್ನು ಕಡಿಮೆಗೊಳಿಸುವ ದೃಷ್ಟಿಯಿಂದ, ಕಾನೂನು ಸುವ್ಯವಸ್ಥೆ ಹಾಗೂರಕ ಸಮರ್ಪಕ ತನಿಖೆಯನ್ನು ಪರಿಣಾಮಕಾರಿಯಾಗಿ ನಡೆಸಿಕೊಂಡು ಹೋಗುವುದಕ್ಕಾಗಿ ಪೋಲೀಸರ ಅಧಿಕಾರವನ್ನು ಮೊಟಕುಗೊಳಿಸದೆಯೇ ಬಂಧನಕ್ಕೆ ಸಂಬಂಧಿಸಿದ ಮಾರ್ಗಸೂಚಿಗಳನ್ನು ನಿಗದಿಪಡಿಸಲಾಗಿದೆ.

## ಬಂಧನಕ್ಕೆ ಮುನ್ನ

> ನಿಜವಾದ ಹಾಗೂ ಅಕೃತ್ರಿಮವಾದ ದೂರನ್ನು ಪಡೆದಿದ್ದಲ್ಲಿ, ಕೆಲವು ತನಿಖೆಗಳನ್ನು ನಡೆಸಿದ ನಂತರ ವ್ಯಕ್ತಿಯು ಆ ಕಾರ್ಯದಲ್ಲಿ ಭಾಗಿಯಾಗಿದ್ದು ಬಂಧಿಸುವ ಅವಶ್ಯಕತೆ ಇದೆ ಎಂದು ಕಂಡುಬಂದಲ್ಲಿ ಸೂಕ್ತವಾದ ಒಂದು ತೀರ್ಮಾನಕ್ಕೆ ಬಂದ ಮೇಲೆ ಮಾತ್ರ ವಾರಂಟ್ ಇಲ್ಲದೆಯೇ ಬಂಧಿಸುವ ಅಧಿಕಾರವನ್ನು ಚಲಾಯಿಸಲು ಸಾಧ್ಯ.
>
> [ಜೋಗೀಂದರ್ ಕುಮಾರನ ಪ್ರಕರಣ - (1994) 4 ಎಸಿಸಿ 260).

> ಕೇವಲ ಅಧಿಕಾರವನ್ನು ಹೊಂದಿರುವುದರಿಂದ ಮಾತ್ರ ಬಂಧನವನ್ನು ಸಮರ್ಥಿಸಲು ಸಾಧ್ಯವಿಲ್ಲ. ಕಾನೂನು ಪ್ರಕಾರ, ವಾರಂಟ್ ಇಲ್ಲದೇ ಬಂಧಿಸುವುದು ವಿಚಾರಣಾರ್ಹ ಅಪರಾಧವಾಗಿರುತ್ತದೆ.

> ಜೋಗೀಂದರ್ ಕುಮಾರ್‌ಗೆ ಸಂಬಂಧಿಸಿದಂತೆ ಸರ್ವೋಚ್ಚ ನ್ಯಾಯಾಲಯ ನೀಡಿದ ತೀರ್ಪಿನ ನಂತರ ಬಂಧಿಸುವ ಅಧಿಕಾರವನ್ನು ಸೂಕ್ತ ರೀತಿಯಲ್ಲಿ ಚಲಾಯಿಸಲಾಗಿದೆಯೇ ಇಲ್ಲವೇ ಎಂಬುದನ್ನು ಸ್ಪಷ್ಟವಾಗಿ ಸಮರ್ಥಿಸಿಕೊಳ್ಳಬೇಕಾಗಿರುತ್ತದೆ. .

> ವಿಚಾರಣಾರ್ಹ ಅಪರಾಧ ಪ್ರಕರಣಗಳಲ್ಲಿ ಈ ಕೆಳಗೆ ನೀಡಲಾಗಿರುವ ಯಾವುದಾದರೊಂದರಲ್ಲಿ ಸಮರ್ಥಿಸಿಕೊಳ್ಳಬಹುದಾಗಿದೆ:

(i) ಕೊಲೆ, ಡಕಾಯಿತಿ, ದರೋಡೆ, ಅತ್ಯಾಚಾರಗಳಂತಹ ತೀವ್ರ ಅಪರಾಧದಲ್ಲಿ ಭಾಗಿಯಾದ ಆರೋಪಿಯು ಕಾನೂನಿನ ಪ್ರಕ್ರಿಯೆಗಳ ಹಿಡಿತಕ್ಕೆ ಸಿಗದೆ ತಪ್ಪಿಸಿಕೊಳ್ಳದಂತೆ ತಡೆಯಲು ಇಂತಹ ಸಂದರ್ಭಗಳಲ್ಲಿ ಬಂಧನವು ಅನಿವಾರ್ಯವಾಗಿರುತ್ತದೆ.

(ii) ಅನುಮಾನಿತ ವ್ಯಕ್ತಿಯು ಹಿಂಸಾತ್ಮಕ ನಡವಳಿಕೆಯನ್ನು ಹೊಂದಿದವನಾಗಿದ್ದು ಮುಂದೆ ಮತ್ತಷ್ಟು ಅಪರಾಧಗಳನ್ನು ಎಸಗುವ ಸಾಧ್ಯತೆಯನ್ನು ಹೊಂದಿದ್ದರೆ,

(iii) ಸಾಕ್ಷಿ ಪುರಾವೆಗಳನ್ನು ನಾಶಪಡಿಸುವಂತಹವನಾಗಿದ್ದರೆ ಅಥವಾ ಸಾಕ್ಷಿದಾರರ ಮಧ್ಯೆ ಪ್ರವೇಶಿಸುವಂತಹವನಾಗಿದ್ದರೆ ಅಥವಾ ಇನ್ನೂ ಬಂಧನಕ್ಕೊಳಗಾಗದಿರುವ ಇನ್ನಿತರ ಶಂಕಾಸ್ಪದ ವ್ಯಕ್ತಿಗಳನ್ನು ಎಚ್ಚರಿಸುತ್ತಿದ್ದರೆ ಅದನ್ನು ತಡೆಯುವುದಕ್ಕಾಗಿ ಬಂಧಿಸಬೇಕಾಗುತ್ತದೆ.

(iv) ಅನುಮಾನಿತ ವ್ಯಕ್ತಿಗೆ ಅಪರಾಧ ಎಸಗುವ ಚಾಳಿಯಿದ್ದು, ಆತನನ್ನು ಬಂಧಿಸದಿದ್ದಲ್ಲಿ, ಮುಂದೆ ಅಂತಹುದೇ ಮತ್ತಷ್ಟು ಅಪರಾಧಗಳನ್ನು ಎಸಗುವ ಸಾಧ್ಯತೆ ಇರುತ್ತದೆ. [ರಾಷ್ಟ್ರೀಯ ಪೊಲೀಸ್ ಆಯೋಗದ 3ನೇ ವರದಿ]

> ಈ ಮೇಲೆ ತಿಳಿಸಲಾಗಿರುವ ಹೇಯವಾದ ಅಪರಾಧಗಳ ಹೊರತಾಗಿದ್ದರೆ, ಬಂಧಿಸುವ ಅಗತ್ಯವಿರುವುದಿಲ್ಲ. ಬದಲಿಗೆ ಪೊಲೀಸ್ ಅಧಿಕಾರಿಯು ಆ ವ್ಯಕ್ತಿಗೆ ಪೊಲೀಸ್ ಠಾಣೆಗೆ ಹಾಜರಾಗುವಂತೆ ಮತ್ತು ಠಾಣೆ ವ್ಯಾಪ್ತಿಯಿಂದ ಹೊರಹೋಗದಿರುವಂತೆ ನೋಟೀಸೊಂದನ್ನು ಜಾರಿ ಮಾಡಬಹುದು (ಜೋಗೀಂದರ್ ಕುಮಾರನ ಪ್ರಕರಣ ನೋಡಿ (1994) ಎಸ್‌ಸಿ 260).

> ಶಂಕಾಸ್ಪದ ವ್ಯಕ್ತಿಯು ತಲೆ ತಪ್ಪಿಸಿಕೊಳ್ಳಬಹುದೆಂಬ ಬಲವಾದ ಅನುಮಾನವಿದ್ದಲ್ಲಿ ಅದನ್ನು ಹೊರತುಪಡಿಸಿದಂತೆ, ಜಾಮೀನು ನೀಡಬಹುದಾದ ಅಪರಾಧಗಳಾಗಿದ್ದಲ್ಲಿ ಬಂಧಿಸುವ ಅಧಿಕಾರವನ್ನು ಪ್ರಯೋಗಿಸಬೇಕಾಗಿಲ್ಲ,

> ಬಂಧನದ ಪ್ರಕ್ರಿಯೆಯನ್ನು ಅಥವಾ ಆಪಾದಿತನನ್ನು ಪ್ರಶ್ನೆ ಕೇಳಿ ಪರೀಕ್ಷಿಸುವ ಪ್ರಕ್ರಿಯೆಯನ್ನು ನಡೆಸುವ ಪೊಲೀಸ್ ಅಧಿಕಾರಿಗಳು ತಮ್ಮ ಗುರುತನ್ನು ಸ್ಪಷ್ಟವಾಗಿ ಸೂಚಿಸುವಂತೆ ಹೆಸರು ಮತ್ತು ಪದನಾಮ ಹೊತ್ತ ಗುರುತಿನ ಚೀಟಿಗಳನ್ನು ಧರಿಸಿರಬೇಕು.

ಬಂಧಿಸುವ ಅಥವಾ ವಿಚಾರಣೆ ನಡೆಸುವ ಪೊಲೀಸ್ ನೌಕರರ ವಿವರಗಳು ಏಕಕಾಲದಲ್ಲಿ ಪೊಲೀಸ್ ಠಾಣೆಯಲ್ಲಿ ಇರಿಸಲಾಗಿರುವ ದಾಖಲೆ ಪುಸ್ತಕದಲ್ಲಿ ನಮೂದಿಸಲ್ಪಟ್ಟಿರಬೇಕು.

ಬಂಧನ

> ಬಂಧಿಸುವ ಸಂದರ್ಭದಲ್ಲಿ ನಿಯಮಾನುಸಾರವಾಗಿ ಬಲಪ್ರಯೋಗ ನಡೆಸಕೂಡದು. ಆದರೆ ಬಂಧನಕ್ಕೆ ಬಲವಾದ ಪ್ರತಿರೋಧ ವ್ಯಕ್ತವಾದಲ್ಲಿ ಆ ಪ್ರತಿರೋಧವನ್ನು ತಡೆಯಲು ಅಲ್ಪ ಬಲಪ್ರಯೋಗ ಮಾಡಬಹುದು. ಆದರೆ ಬಂಧಿಸಲ್ಪಡುವ ವ್ಯಕ್ತಿಯ ದೇಹದ ಮೇಲೆ ಗಾಯಗಳು ಕಂಡುಬರದಂತೆ ಜಾಗ್ರತೆ ವಹಿಸಬೇಕು.

> ಬಂಧಿಸಲ್ಪಡುವ ವ್ಯಕ್ತಿಯ ವ್ಯಕ್ತಿ ಘನತೆಗೆ ಕುಂದುಂಟಾಗಬಾರದು. ಯಾವುದೇ ಕಾರಣಕ್ಕೂ ಬಂಧಿಸಲ್ಪಟ್ಟ ವ್ಯಕ್ತಿಯ ಸಾರ್ವಜನಿಕ ಪ್ರದರ್ಶನ ಅಥವಾ ಮೆರವಣಿಗೆ ಮಾಡಿಸಲು ಅವಕಾಶವಿಲ್ಲ.

> ಬಲಪ್ರಯೋಗ ಅಥವಾ ಆಕ್ರಮಣ ನಡೆಸದೆ ವ್ಯಕ್ತಿಯ ಖಾಸಗಿತನದ ಹಕ್ಕನ್ನು ಗಮನದಲ್ಲಿರಿಸಿಕೊಂಡು ಬಂಧನಕ್ಕಾಗಿ ಅನ್ವೇಷಣೆಯನ್ನು ಗೌರವಯುತವಾಗಿ ನಡೆಸಬೇಕು. ಮಹಿಳೆಯರ ಬಗೆಗಿನ ಅನ್ವೇಷಣೆಯನ್ನು ಸಭ್ಯತೆಗೆ ಶಿಸ್ತಿನ ಆದ್ಯತೆ ನೀಡಿ ಮಹಿಳೆಯರ ಮುಖಾಂತರ ನಡೆಸಬೇಕು (ಪರಿಚ್ಛೇದ.51(2) ಅಪರಾಧ ದಂಡಸಂಹಿತೆ)

> ಕೈಕೋಳಗಳು ಅಥವಾ ಕಾಲಿಗೆ ಹಾಕುವ ಸರಪಳಿಗಳನ್ನು ಬಳಸಕೂಡದು. ಒಂದು ವೇಳೆ ಹಾಗೇನಾದರೂ ಬಳಸಲೇಬೇಕಾಗಿ ಬಂದಲ್ಲಿ ಪ್ರೇಮ್ ಶಂಕರ್ ಶುಕ್ಲಾ ವರ್ಸಸ್ ದೆಹಲಿ ಆಡಳಿತ [(1980) 3 ಎಸ್‌ಸಿಸಿ 526] ಹಾಗೂ ಸಿಟಿಜನ್ ಫಾರ್ ಡೆಮಾಕ್ರಸಿ ವರ್ಸಸ್ ಅಸ್ಸಾಮ್ ರಾಜ್ಯ[(1995) 3 ಎಸ್‌ಸಿಸಿ 743] ಇವುಗಳಿಗೆ ಸಂಬಂಧಿಸಿದ ತೀರ್ಪಿನ ಸಂದರ್ಭದಲ್ಲಿ ಕೈಗೊಂಡ ಶಿಸ್ತಿನ ಕಾನೂನು ಕ್ರಮದಂತೆ ಪದೇ ಪದೇ ವಿವರಿಸಿರುವಂತೆ ಮತ್ತು ಕಡ್ಡಾಯಗೊಳಿಸಿರುವಂತೆ ಅದನ್ನು ಅನುಸರಿಸಬಹುದಾಗಿದೆ.

> ಬಂಧಿತ ವ್ಯಕ್ತಿಗಳು ಮಹಿಳೆಯರಾಗಿದ್ದಲ್ಲಿ ಪ್ರಾಯೋಗಿಕವಾಗಿ ಸಾಧ್ಯವಿರುವಲ್ಲೆಲ್ಲ ಮಹಿಳಾ ಪೊಲೀಸ್ ಅಧಿಕಾರಿಗಳು ಜೊತೆಗಿರಬೇಕು. ಸೂರ್ಯ ಅಸ್ತಮಿಸುವ ಹಾಗೂ ಮೂಡುವ ನಡುವಿನ ಸಮಯದಲ್ಲಿ ಮಹಿಳೆಯರನ್ನು ಬಂಧಿಸುವುದನ್ನು ತಡೆಯಬೇಕು.

> ಮಕ್ಕಳು ಅಥವಾ ಬಾಲರನ್ನು ಬಂಧಿಸಬೇಕಾಗಿ ಬಂದಾಗ ಯಾವುದೇ ಪರಿಸ್ಥಿತಿಯಲ್ಲೂ ಬಲಪ್ರಯೋಗ ಅಥವಾ ಹೊಡೆತ ಬಡಿತವನ್ನು ನಡೆಸಕೂಡದು. ಈ ಉದ್ದೇಶಕ್ಕಾಗಿ, ಪೊಲೀಸ್ ಅಧಿಕಾರಿಗಳು ಗೌರವಾನ್ವಿತ ನಾಗರಿಕರನ್ನು ಜೊತೆಗಿರಿಸಿಕೊಳ್ಳಬೇಕು, ಇದರಿಂದಾಗಿ ಮಕ್ಕಳಲ್ಲಿ ಭಯ ಹುಟ್ಟಿಸದಂತೆ ಮತ್ತು ಅಲ್ಪ ಪ್ರಮಾಣದ ಬಲ ಪ್ರಯೋಗವಾಗುವಂತೆ ನೋಡಿಕೊಳ್ಳಬಹುದು.

> ವಾರಂಟ್ ಇಲ್ಲದೆಯೇ ಬಂಧಿಸಿದಾಗ, ಬಂಧಿತ ವ್ಯಕ್ತಿಗೆ ಆ ವ್ಯಕ್ತಿ ಅರ್ಥಮಾಡಿಕೊಳ್ಳಬಲ್ಲ ಭಾಷೆಯಲ್ಲಿ ಯಾವ ಆಧಾರದ ಮೇಲೆ ಬಂಧಿಸಲಾಗಿದೆ ಎಂಬುದನ್ನು ತಿಳಿಯಪಡಿಸಬೇಕು. ಮತ್ತೊಮ್ಮೆ ಈ ಕಾರಣಕ್ಕಾಗಿ, ಪೋಲೀಸರು ಗೌರವಾನ್ವಿತ ನಾಗರಿಕರ ಸಹಕಾರ ಪಡೆದುಕೊಳ್ಳಬಹುದು. ಈ ಆಧಾರಗಳನ್ನು ಅಷ್ಟರಲ್ಲಾಗಲೇ ಪೊಲೀಸ್ ದಾಖಲೆಗಳಲ್ಲಿ ನಮೂದಿಸಿರತಕ್ಕದ್ದು. ಬಂಧಿತ ವ್ಯಕ್ತಿಗೆ ಆತನ ಬಂಧನಕ್ಕೆ ಕಾರಣವೇನೆಂಬುದನ್ನು ಲಿಖಿತ ರೂಪದಲ್ಲಿ ತೋರಿಸಬೇಕು ಮಾತ್ರವಲ್ಲದೆ ಬಂಧಿತ ವ್ಯಕ್ತಿ ಇಚ್ಛಿಸಿದಲ್ಲಿ ಅದರ ಪ್ರತಿಯೊಂದನ್ನು ನೀಡಬೇಕು (ಪರಿಚ್ಛೇದ 50 (1) ಅಪರಾಧ ದಂಡ ಸಂಹಿತೆ).

- ಬಂಧಿತ ವ್ಯಕ್ತಿ ಮಾಡಿಕೊಂಡ ಮನವಿಯ ಮೇರೆಗೆ ಆತನ/ಆಕೆಯ ಸ್ನೇಹಿತರು, ಸಂಬಂಧಿಕರು ಅಥವಾ ಪರಿಚಿತ ವ್ಯಕ್ತಿಗಳಲ್ಲಿ ಒಬ್ಬರಿಗೆ ಆತ/ಆಕೆ ಬಂಧನಕ್ಕೊಳಗಾಗಿರುವ ಸಂಗತಿಯನ್ನು ಮತ್ತು ಶಿಕ್ಷೆ ವಿಧಿಸುವ ಮುನ್ನ ನಡೆಯುವ ವಿಚಾರಣೆ ಸ್ಥಳವನ್ನು ತಿಳಿಸುವಂತೆ ಬೇಡಿಕೊಳ್ಳಬಹುದು.
- ಹಾಗೆ ತಿಳಿಸಲಾಗಿರುವ ವ್ಯಕ್ತಿಯ ಹೆಸರನ್ನು ಪೋಲೀಸರು ರಿಜಿಸ್ಟರಿನಲ್ಲಿ ದಾಖಲಿಸಿಕೊಳ್ಳಬೇಕು [ಜೋಗೀಂದರ್ ಕುಮಾರನ ಪ್ರಕರಣ
- ಜಾಮೀನು ಸಹಿತ ಬಿಡುಗಡೆಗೊಳ್ಳಬಹುದಾದ ಅಪರಾಧಕ್ಕಾಗಿ ವ್ಯಕ್ತಿಯೊಬ್ಬ ಬಂಧಿತನಾಗಿದ್ದಲ್ಲಿ, ಜಾಮೀನಿನ ಮೇಲೆ ಆತ ಬಿಡುಗಡೆ ಹೊಂದುವ ಅವಕಾಶವಿದೆ ಎಂಬುದನ್ನು ಪೊಲೀಸ್ ಅಧಿಕಾರಿಗಳು ಆತನಿಗೆ ತಿಳಿಸುವುದರ ಮೂಲಕ ಜಾಮೀನುದಾರಿಕೆಯ ವ್ಯವಸ್ಥೆ ಮಾಡಿಕೊಳ್ಳಬಹುದು (ಪರಿಚ್ಛೇದ 5(2) ಅಪರಾಧ ದಂಡ ಸಂಹಿತೆ)
- ಬಂಧಿತ ವ್ಯಕ್ತಿಗೆ ಮೇಲೆ ಹೇಳಲಾಗಿರುವ ಹಕ್ಕುಗಳ ವಿಚಾರವನ್ನು ತಿಳಿಸುವುದೇ ಅಲ್ಲದೆ, ತನ್ನ ಆಯ್ಕೆಯ ವಕೀಲರೊಬ್ಬರನ್ನು ಸಂಪರ್ಕಿಸಿ, ಅವರ ಮೂಲಕ ತನ್ನನ್ನು ರಕ್ಷಿಸಿಕೊಳ್ಳಲು ಇರುವ ಹಕ್ಕನ್ನು ಕುರಿತು ತಿಳಿಸಬೇಕು. ರಾಜ್ಯದ ಖರ್ಚಿನಲ್ಲಿ ಆತ ಉಚಿತ ಕಾನೂನು ಸೇವೆಯನ್ನು ಪಡೆದುಕೊಳ್ಳಬಹುದು ಎಂಬುದನ್ನು ಕೂಡ ಆತನಿಗೆ ತಿಳಿಸಬೇಕು [ಡಿ. ಕೆ. ಬಸು ಪ್ರಕರಣ (1997) 1 ಎಸ್‌ಸಿ].
- ಬಂಧಿತ ವ್ಯಕ್ತಿಯನ್ನು ಪೊಲೀಸ್ ಠಾಣೆಗೆ ಕರೆತಂದಾಗ, ವೈದ್ಯಕೀಯ ನೆರವಿಗೆ ಸಂಬಂಧಿಸಿದಂತೆ ಆತ ಮನವಿ ಮಾಡಿಕೊಂಡಲ್ಲಿ ಆತನಿಗೆ ತಕ್ಷಣವೇ ವೈದ್ಯಕೀಯ ಸೇವಾ ಸೌಲಭ್ಯವನ್ನು ಒದಗಿಸಿ ಕೊಡಬೇಕು. ಆತನಿಗಿರುವ ಆ ಹಕ್ಕನ್ನು ಕುರಿತು ಆತನಿಗೆ ತಿಳಿಸಬೇಕು. ಬಂಧಿತ ವ್ಯಕ್ತಿಗೆ ವೈದ್ಯಕೀಯ ಸೇವೆಯು ಅಗತ್ಯವಾಗಿದ್ದು, ಅತನ ಸ್ಥಿತಿಯು ಅಂತಹ ಒಂದು ಮನವಿಯನ್ನು ಮಾಡಿಕೊಳ್ಳಬಹುದಾದ ರೀತಿಯಲ್ಲಿ ಇರದಿರುವುದು ಪೊಲೀಸ್ ಅಧಿಕಾರಿಯ ಗಮನಕ್ಕೆ ಬಂದಲ್ಲಿ ಶೀಘ್ರವೇ ಆತನಿಗೆ ಅದರ ವ್ಯವಸ್ಥೆ ಮಾಡಿಸಬೇಕು. ಇದನ್ನು ಏಕಕಾಲದಲ್ಲಿ ರಿಜಿಸ್ಟರಿನಲ್ಲಿ ದಾಖಲಿಸಬೇಕು. ಮಹಿಳೆಯರು ಅಂತಹ ಒಂದು ವೈದ್ಯಕೀಯ ನೆರವಿನ ಕೋರಿಕೆ ಸಲ್ಲಿಸಿದಲ್ಲಿ ಅಂತಹವರಿಗೆ ನೋಂದಾಯಿತ ಮಹಿಳಾ ವೈದ್ಯರಿಂದಲೇ ವೈದ್ಯಕೀಯ ಸೇವೆ ಕೊಡಿಸಬೇಕು (ಪರಿಚ್ಛೇದ 53 ಅಪರಾಧ ದಂಡ ಸಂಹಿತೆ).
- ಬಂಧಿಸಿದ ಮಾಹಿತಿ ಮತ್ತು ವಿಚಾರಣೆಗಾಗಿ ಇರಿಸಲಾಗಿರುವ ಸ್ಥಳದ ಮಾಹಿತಿಯನ್ನು ಬಂಧಿಸಿದರ ಪೊಲೀಸ್ ಅಧಿಕಾರಿಯು ತಡ ಮಾಡದೆ ಪೊಲೀಸ್ ಕಂಟ್ರೋಲ್ ರೂಂ ಮತ್ತು ಜಿಲ್ಲಾ/ರಾಜ್ಯ ಮಟ್ಟದ ಮುಖ್ಯ ಕಛೇರಿಗಳಿಗೆ ನೀಡಬೇಕು. ಮೇಲ್ವಿಚಾರಣೆಯ ಕಾರ್ಯಯಂತ್ರವೊಂದು ದಿನದ 24 ಗಂಟೆಯೂ ಇದರ ಮೇಲ್ವಿಚಾರಣೆಯಲ್ಲಿ ನಿರತವಾಗಿರಬೇಕು.
- ವ್ಯಕ್ತಿಯೊಬ್ಬನನ್ನು ಬಂಧಿಸಿದ ಕೂಡಲೇ, ಬಂಧಿಸಿದ ಪೊಲೀಸ್ ಅಧಿಕಾರಿಯು ಬಂಧಿತನಾದವನ ದೇಹದ ಮೇಲೆ ಯಾವುದೇ ಗಾಯ (ಗಳು) ಇದ್ದವೇ ಇರಲಿಲ್ಲವೇ ಎಂಬುದನ್ನು ಬಂಧನದ ರಿಜಿಸ್ಟರಿನಲ್ಲಿ ದಾಖಲಿಸಬೇಕು. ಬಂಧಿತ ವ್ಯಕ್ತಿಯ ದೇಹದ ಮೇಲೆ ಗಾಯಗಳೇನಾದರೂ ಕಂಡುಬಂದಲ್ಲಿ ಅದರ ಸಂಪೂರ್ಣ ವಿವರ ಹಾಗೂ ಆ ಗಾಯಗಳು ಹೇಗೆ ಸಂಭವಿಸಿದವು ಎಂಬುದಕ್ಕೆ ಕಾರಣಗಳನ್ನು ವಿವರವಾಗಿರ ರಿಜಿಸ್ಟರಿನಲ್ಲಿ ಉಲ್ಲೇಖಿಸಬೇಕು. ಹೀಗೆ ನಮೂದಿಸಲ್ಪಟ್ಟ ದಾಖಲೆಗೆ

ಪೊಲೀಸ್ ಅಧಿಕಾರಿ ಹಾಗೂ ಬಂಧಿತ ವ್ಯಕ್ತಿ ಇಬ್ಬರೂ ಸಹಿ ಮಾಡಬೇಕು. ಬಂಧಿತ ವ್ಯಕ್ತಿಯ ಬಿಡುಗಡೆಯ ಸಂದರ್ಭದಲ್ಲಿ ಮೇಲಿನವುಗಳಿಗೆ ಸಂಬಂಧಿಸಿದಂತೆ ಪೊಲೀಸ್ ಅಧಿಕಾರಿಯ ಸಹಿ ಇರುವ ಪ್ರಮಾಣ ಪತ್ರವೊಂದನ್ನು ಬಂಧಿತನಾಗಿದ್ದ ವ್ಯಕ್ತಿಗೆ ನೀಡಬೇಕು.

> ವಿಚಾರಣೆ ಸಂದರ್ಭದಲ್ಲಿ, ಬಂಧಿತ ವ್ಯಕ್ತಿಯನ್ನು ನ್ಯಾಯಾಲಯದ ಆದೇಶದನ್ವಯ ಪೋಲೀಸರ ವಶಕ್ಕೆ ಒಪ್ಪಿಸಿದಲ್ಲಿ, ಬಂಧನದಲ್ಲಿ ಆತ ಸಂಬಂಧಪಟ್ಟ ರಾಜ್ಯ ಅಥವಾಕೇಂದ್ರ ಶಾಸಿತ ಪ್ರದೇಶಗಳ ಆರೋಗ್ಯ ಸೇವೆಯ ನಿರ್ದೇಶಕರಿಂದ ನೇಮಕಗೊಳಿಸಲ್ಪಟ್ಟ ಅಂಗೀಕೃತ ವೈದ್ಯರುಗಳ ವೇದಿಕೆಯಿಂದ ಆಯ್ಕೆಗೊಂಡ ವೈದ್ಯರೊಬ್ಬರ ವಶದಲ್ಲಿದ್ದು, ಪ್ರತಿ 48 ಗಂಟೆಗಳಿಗೊಮ್ಮೆ ತರಬೇತಿ ಹೊಂದಿದ ವೈದ್ಯಾಧಿಕಾರಿಗಳಿಂದ ಆತನ ವೈದ್ಯಕೀಯ ಪರೀಕ್ಷೆ ನಡೆಸಲ್ಪಡಬೇಕು. ಪೋಲೀಸರ ವಶದಿಂದ ಬಿಡುಗಡೆ ಹೊಂದುವ ಸಂದರ್ಭದಲ್ಲಿ, ಬಂಧಿತ ವ್ಯಕ್ತಿಯನ್ನು ವೈದ್ಯಕೀಯ ಪರೀಕ್ಷೆಗೊಳಪಡಿಸಿ ಆತನ ದೇಹದ ಮೇಲೆ ಯಾವುದಾದರೂ ಗಾಯಗಳಿದ್ದವೇ ಇಲ್ಲವೇ ಎಂಬುದರ ವಾಸ್ತವ ಸ್ಥಿತಿಯ ಕುರಿತ ಪ್ರಮಾಣ ಪತ್ರವೊಂದನ್ನು ನೀಡಬೇಕು.

## ಬಂಧನಾನಂತರ

> ಬಂಧಿತ ವ್ಯಕ್ತಿಯನ್ನು ಆತ ಬಂಧಿಸಲ್ಪಟ್ಟ 24 ಗಂಟೆಗಳೊಳಗಾಗಿ ಸೂಕ್ತ ನ್ಯಾಯಾಲಯದ ಮುಂದೆ ಹಾಜರುಪಡಿಸಬೇಕು (ಪರಿಚ್ಛೇದಗಳು 56 ಮತ್ತು 57 ಅ.ದಂ.ಸಂ).

> ಬಂಧಿತ ವ್ಯಕ್ತಿಗೆ ಪ್ರಶ್ನೆ ಹಾಕಿ ಪರೀಕ್ಷಿಸುವ ಸಂದರ್ಭದಲ್ಲಿ ಆತ ತನ್ನ ವಕೀಲರನ್ನು ಭೇಟಿಯಾಗಲು ಅನುಮತಿಸಬೇಕು.

> ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗುವ ಸ್ಥಳದಲ್ಲಿ, ಅಂದರೆ ಆ ಉದ್ದೇಶಕ್ಕಾಗೆಂದೇ ಸರ್ಕಾರದಿಂದ ಸೂಚಿತವಾಗಿರುವ ಸ್ಥಳದಲ್ಲಿ ಪ್ರಶ್ನೆ ಹಾಕಿ ಪರಿಶೀಲಿಸಬೇಕು. ಈ ಸ್ಥಳ ತಲುಪಲು ಸಾಧ್ಯವಾಗುವಂತಹ ಸ್ಥಳವಾಗಿದ್ದು, ಬಂಧಿತನ ಸ್ನೇಹಿತರು, ಸಂಬಂಧಿಕರಿಗೆ ಈ ವಿಚಾರಣೆ ನಡೆಸಲಾಗುತ್ತಿರುವ ಸ್ಥಳದ ಬಗ್ಗೆ ಮಾಹಿತಿ ನೀಡಿರಬೇಕು.

> ಬದುಕುವ, ಘನತೆಯ, ಸ್ವಾತಂತ್ರ್ಯದ ಹಕ್ಕುಗಳನ್ನು ಗಮನದಲ್ಲಿರಿಸಿಕೊಂಡು, ಹಿಂಸಾತ್ಮಕವಾದ ಮತ್ತು ಕೀಳು ಮಟ್ಟದ ನಡೆಸಿಕೊಳ್ಳುವಿಕೆಗೆ ವಿರುದ್ಧವಾಗಿರುವ ಹಕ್ಕುಗಳನ್ನು ಗಮನದಲ್ಲಿರಿಸಿಕೊಂಡು ಸುಸಂಗತವಾದ ವಿಧಾನಗಳ ಮೂಲಕ ಪ್ರಶ್ನಿಸಬೇಕು

## ಮಾರ್ಗಸೂಚಿಗಳ ಜಾರಿ

1. ಮಾರ್ಗಸೂಚಿಗಳನ್ನು ಸಾಧ್ಯವಿರುವ ಎಲ್ಲ ಭಾಷೆಗಳಿಗೂ ಭಾಷಾಂತರಿಸಿ ಪ್ರತಿಯೊಂದು ಪೊಲೀಸ್ ಠಾಣೆಗೂ ನೀಡಬೇಕು. ಪ್ರತಿಯೊಬ್ಬ ಪೋಲೀಸನಿಗೂ ನೀಡಬಹುದಾದ ರೀತಿಯಲ್ಲಿ ಕೈಪಿಡಿಯೊಂದರಲ್ಲಿ ಕೂಡ ಅಡಕಗೊಳಿಸಬಹುದು.

2. ಈ ಮಾರ್ಗಸೂಚಿಗಳಿಗೆ ಮುದ್ರಣ ಮಾಧ್ಯಮ ಅಥವಾ ಇನ್ನಾವುದೇ ವಿದ್ಯುನ್ಮಾನ ಮಾಧ್ಯಮದ ಮೂಲಕ ಕನಿಷ್ಠ ಪ್ರಚಾರ ಪಡೆಯಬಹುದು. ಒಂದಕ್ಕಿಂತ ಹೆಚ್ಚು ಭಾಷೆಗಳಲ್ಲಿ, ನೋಟೀಸ್ ಬೋರ್ಡಿನ ಮೇಲೆ ಎಲ್ಲ ಪೊಲೀಸ್ ಠಾಣೆಗಳಲ್ಲಿ ಎದ್ದು ಕಾಣುವ ರೀತಿಯಲ್ಲಿ ಹಾಕಬಹುದು.

3. ಮಾರ್ಗಸೂಚಿಯ ಉಲ್ಲಂಘನೆಯ ದೂರಿನ ವಿಚಾರಣೆಯನ್ನು ಕ್ಷಿಪ್ರವಾಗಿ ನಡೆಸಿ ಪರಿಷ್ಕರಣೆಯ ಕ್ರಮವನ್ನು ತೆಗೆದುಕೊಳ್ಳಲು ಸಾಧ್ಯವಾಗುವಂತೆ ಪೋಲೀಸರು ದೂರು ಪರಿಹಾರ ವ್ಯವಸ್ಥೆಯೊಂದರ ರಚನೆ ಮಾಡಬೇಕು.

4. ನೋಟೀಸ್ ಬೋರ್ಡಿನ ಮೇಲೆ ಎಲ್ಲರ ಕಣ್ಣಿಗೆ ಬೀಳುವಂತೆ ಹಾಕಲಾಗಿರುವ ಮಾರ್ಗಸೂಚಿಯಲ್ಲಿ ದೂರು ಪರಿಹಾರಕ ವ್ಯವಸ್ಥೆಯಿರುವ ಸ್ಥಳವನ್ನು ಹಾಗೂ ಅದರಲ್ಲಿರುವವರ ತಂಡವನ್ನು ಸಮೀಪಿಸುವ ಬಗೆಯನ್ನು ಸೂಚಿಸಿರತಕ್ಕದ್ದು.

5. ಸರ್ಕಾರೇತರ ಸಂಸ್ಥೆಗಳು ಹಾಗೂ ನ್ಯಾಯಾಲಯಗಳು, ಆಸ್ಪತ್ರೆಗಳು, ವಿಶ್ವ ವಿದ್ಯಾನಿಲಯಗಳು ಸೇರಿದಂತೆ ಸಾರ್ವಜನಿಕ ಸಂಸ್ಥೆಗಳು ಈ ಮಾರ್ಗಸೂಚಿಯು ಹೆಚ್ಚು ಹೆಚ್ಚು ಜನರನ್ನು ತಲುಪುವಂತೆ ಮಾಡುವ ಪ್ರಚಾರದಲ್ಲಿ ಭಾಗಿಯಾಗಬೇಕು.

6. ದೂರು ಪರಿಹಾರಕ ವ್ಯವಸ್ಥೆಯ ಕಾರ್ಯಚಟುವಟಿಕೆಗಳು ಪಾರದರ್ಶಕವಾಗಿರಬೇಕು ಮತ್ತು ಅವರ ವರದಿಗಳು ಕೈಗೆ ಸಿಗುವಂತಿರಬೇಕು.

7. ಮಾರ್ಗಸೂಚಿಯನ್ನು ಉಲ್ಲಂಘಿಸುವ ಮೂಲಕ ತಪ್ಪಾದ ಮಾರ್ಗ ಹಿಡಿಯುವ ಪೊಲೀಸ್ ಅಧಿಕಾರಿಗಳ ವಿರುದ್ಧ ಕೂಡಲೇ ಕ್ರಮ ಕೈಗೊಳ್ಳಬೇಕು. ಇದನ್ನು ಇಲಾಖಾ ವಿಚಾರಣೆಯ ಮಿತಿಗೆ ಒಳಪಡಿಸದೆ ಅದಕ್ಕಾಗಿ ಅಪರಾಧ ನ್ಯಾಯ ವ್ಯವಸ್ಥೆಯೊಂದನ್ನು ಸ್ಥಾಪಿಸಿ ಅದು ಚಲನಶೀಲವಾಗಿರುವಂತೆ ನೋಡಿಕೊಳ್ಳಬೇಕು.

8. ಮಾರ್ಗಸೂಚಿಯ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಪೊಲೀಸ್ ಅಧಿಕಾರಿಗಳ ನಡುವೆ ಈ ಕುರಿತು ಸೂಕ್ಷ್ಮತೆಯನ್ನು ಮೂಡಿಸುವ ಮತ್ತು ತರಬೇತಿ ನೀಡುವ ಅವಶ್ಯಕತೆ ಇದೆ.

# ಪೋಲಿಗ್ರಾಫ್ ಪರೀಕ್ಷೆ (ಸುಳ್ಳು ಪತ್ತೆ ಹಚ್ಚುವ ಪರೀಕ್ಷೆ)ಯ ಕಾರ್ಯನಿರ್ವಹಣೆಗೆ ಸಂಬಂಧಿಸಿದ ಕಾರ್ಯಸೂಚಿ

**ಸಂ.117/8/97-98**

**ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ**

**(ಕಾನೂನು ವಿಭಾಗ - III)**

ಎಸ್. ಕೆ. ಶ್ರೀವಾಸ್ತವ
ಸಹಾಯಕ ರಿಜಿಸ್ಟ್ರಾರರು (ಕಾನೂನು)

ಸರ್ದಾರ್ ಪಟೇಲ್ ಭವನ
ಸಂಸದ್ ಮಾರ್ಗ
ನವ ದೆಹಲಿ - 110 001
11ನೇ ಜನವರಿ, 2000

ರವರಿಗೆ,

ರಾಜ್ಯಗಳ/ಕೇಂದ್ರ ಶಾಸಿತ ಪ್ರದೇಶಗಳ ಮುಖ್ಯ ಕಾರ್ಯದರ್ಶಿಗಳು,

ವಿಷಯ: ಪೋಲಿಗ್ರಾಫ್ ಪರೀಕ್ಷೆ (ಸುಳ್ಳು ಪತ್ತೆ ಹಚ್ಚುವ ಪರೀಕ್ಷೆ)ಯ ಕಾರ್ಯನಿರ್ವಹಣೆಗೆ ಸಂಬಂಧಿಸಿದ ಕಾರ್ಯಸೂಚಿ

ಮಾನ್ಯರೆ,

ದಿನಾಂಕ 12.11.1999ರ ಆಯೋಗದ ನಡಾವಳಿಯಲ್ಲಿ ಆಯೋಗವು ಆಪಾದಿತರ ಮೇಲೆ ನಡೆಸಲಾಗುವ ಪೋಲಿಗ್ರಾಫ್ (ಸುಳ್ಳು ಪತ್ತೆ ಹಚ್ಚುವ ) ಪರೀಕ್ಷೆಯ ಕಾರ್ಯ ನಿರ್ವಹಣೆಗೆ ಸಂಬಂಧಿಸಿದ ಮಾರ್ಗಸೂಚಿಯನ್ನು ಪರಿಗಣಿಸಿದೆ ಎಂದು ತಿಳಿಸಲು ನನಗೆ ನಿರ್ದೇಶನವಿದ್ದು, ಆ ನಿರ್ದೇಶನ ಯಾವುದೆಂದರೆ:

" ಆಯೋಗವು ಮಾರ್ಗಸೂಚಿಯನ್ನು ಸ್ವೀಕರಿಸಿದ್ದು, ಸಂಬಂಧಿಸಿದ ಎಲ್ಲಾ ಅಧಿಕಾರಿಗಳೂ ಅದನ್ನು ತಪ್ಪದೆ ಅನುಸರಿಸುವಂತೆ ಅವರಿಗೆ ಅದನ್ನು ಕಳುಗಿಸಿಕೊಡಬೇಕು ಎಂದು ನಿರ್ಧರಿಸಿದೆ".

ಅದರಂತೆ, ಈ ಮೇಲೆ ಹೇಳಲಾಗಿರುವ ಮಾರ್ಗಸೂಚಿಗಳನ್ನು ಇದರೊಂದಿಗೆ ಕಳುಹಿಸಿ ಕೊಡಲಾಗುತ್ತದೆ.

ಆದ್ದರಿಂದ, ತಾವು ಈ ಮಾರ್ಗಸೂಚಿಗಳನ್ನು ಅನುಸರಿಸುವಂತೆ ಹಾಗೂ ಅದನ್ನು ಪಡೆದುಕೊಂಡಿರುತ್ತೇವೆ ಎಂಬುದನ್ನು ಸೂಚಿಸಲು ಕೋರಿದೆ.

ತಮ್ಮ ವಿಶ್ವಾಸಿ,
ಸಹಿ/-
ಸಹಾಯಕ ರಿಜಿಸ್ಟ್ರಾರರು (ಕಾನೂನು)

**ಅಡಕ: ಮೇಲೆ ಸೂಚಿಸಿರುವಂತೆ.**



# ಆಪಾದಿತನ ಮೇಲೆ ನಡೆಸಲಾಗುವ ಪೋಲಿಗ್ರಾಫ್ (ಸುಳ್ಳು ಪತ್ತೆ ಹಚ್ಚುವ) ಪರೀಕ್ಷೆಗೆ ಸಂಬಂಧಿಸಿದ ಮಾರ್ಗಸೂಚಿಗಳು

ಪೋಲಿಗ್ರಾಫ್ (ಸುಳ್ಳು ಪತ್ತೆ ಹಚ್ಚುವ) ಪರೀಕ್ಷೆಯ ಕಾರ್ಯನಿರ್ವಹಣೆಯನ್ನು ಮುಂಚಿತವಾಗಿ ತಿಳಿಸಿ ಸಮ್ಮತಿ ಪಡೆದುಕೊಳ್ಳದೆ ಬಲ ಪ್ರಯೋಗದ ಮೂಲಕ ಮಾಡಿರುವುದಕ್ಕೆ ಸಂಬಂಧಿಸಿದಂತೆ ಆಯೋಗಕ್ಕೆ ದೂರುಗಳು ಬಂದಿವೆ. ಆಪಾದಿತರು ಯಾವುದೋ ಮಾದಕ ವಸ್ತುವನ್ನು ಸೇವಿಸುವಂತೆ ಮಾಡಿ ಈ ಪರೀಕ್ಷೆಗಳನ್ನು ನಡೆಸಲಾಗಿದೆ ಎಂದು ಹೇಳಲಾಗಿದೆ. ಸುಳ್ಳು ಪತ್ತೆ ಹಚ್ಚುವ ಪರೀಕ್ಷೆಯ ಸಹಾಯವನ್ನು ಪೋಲೀಸರು ಪಡೆಯುವ ಪ್ರಸ್ತುತ ರೂಢಿಯ ಯಾವುದೇ 'ಕಾನೂನು' ನಿಯಂತ್ರಣಕ್ಕೊಳಪಟ್ಟಿಲ್ಲ ಅಥವಾ ಯಾವುದೇ ಮಾರ್ಗಸೂಚಿಗೆ ಅನುಗುಣವಾಗಿಲ್ಲ. ಆಪಾದಿತನು ತನ್ನ ವಿರುದ್ಧ ತಾನೇ ಸಾಕ್ಷಿ ಕೊಟ್ಟುಕೊಳ್ಳಬಹುದಾದಂತಹ ಒತ್ತಡಕ್ಕೆ ಒಳಗಾಗಲು ಇದೊಂದು ಸಾಧನವಾಗಬಹುದು. ಆ ಮೂಲಕ ಪ್ರಮಾಣ ಸಾಕ್ಷ್ಯಕ್ಕಾಗಿ ನಿರ್ಬಂಧಿಸುವುದರ ವಿರುದ್ಧವಾಗಿರುವ ಸಂವಿಧಾನಬದ್ಧವಾದ ವಿನಾಯಿತಿಯನ್ನು ಉಲ್ಲಂಘಿಸಿದಂತಾಗುತ್ತದೆ.

ಖಾಸಗಿ ವಿಷಯಗಳಿಗೆ ಕೈಹಾಕುವ ಈ ವಿಚಾರಗಳು ನ್ಯಾಯಾಲಯಗಳ ಗಮನ ಸೆಳೆದಿವೆ. (ಗೋಮತಿ Vs. ವಿಜಯರಾಘವನ್ (1995) Cr.L.J. 81 (ಮದ್ರಾಸ್); ತುಷಾರ್ ರಾಯ್ Vs. ಶುಕ್ಲ ರಾಯ್ (1993)Cr.L.J. 1959 (ಕೊಲ್ಕತ್ತ); ಸದಾಶಿವ Vs. ನಂದಿನಿ (1995) Cr.L.J. 4090) ಇವು ನೋಡಿ. ಮದುವೆ ವಿವಾದಗಳಿಗೆ ಸಂಬಂಧಿಸಿ, ಕಾನೂನು ಮಧ್ಯ ಪ್ರವೇಶಿಕೆಯ ಸಲಹೆ ನೀಡಿತು. ಅಮೆರಿಕದ ನ್ಯಾಯಾಲಯಗಳ ಪ್ರಕಾರ ಇಂತಹ ಪರೀಕ್ಷೆಗಳು ಪ್ರತಿದಿನ ಬದುಕಿನ ಭಾಗವಾಗಿ ಬಿಟ್ಟಿದೆ ಮತ್ತು ಅದು ಸಾಧಾರಣ ಪ್ರಕ್ರಿಯೆಯ ಜೊತೆಗೆ ಇರಬೇಕು.(ಬ್ರೆಯಿತ್‌ಬೋಫ್ Vs.ಅಬ್ರಾಹಾಂ (1959) 352 US 432 ನೋಡಿ). ಪುರಾವೆ ನೀಡುವುದಕ್ಕಿರುವ ಒತ್ತಾಯಕ್ಕೆ ವಿರುದ್ಧವಾದ ಒಂದು ವಿಶೇಷಾನುಕೂಲ ಏನೆಂದರೆ "ವ್ಯಕ್ತಿಯ ಬಾಯಿ ಬಿಡಿಸುವುದರಿಂದ ಮಾತ್ರ ರಕ್ಷಿಸುತ್ತದೆ"(ಬ್ಲಾಕ್‌ಫೋರ್ಡ್ Vs. U.S. (1958) 247 F (20) 745 ನೋಡಿ), ಎಂಬ ನಿಲುವನ್ನುತೋರಲು, ಬದುಕು ಮತ್ತು ಸ್ವಾತಂತ್ರ್ಯದ ಪರಿಚ್ಛೇದಗಳು ಉಲ್ಲೇಖಿಸಲಾಗಿಲ್ಲ ಎನ್ನುವುದು ಅಷ್ಟು ತೃಪ್ತಿ ತರುವಂತಹುದಲ್ಲ. ಭಾರತದ ಸಂದರ್ಭದಲ್ಲಿ ಅತಿಕ್ರಮಿಸುವುದರಿಂದ ಮತ್ತು ಸ್ವಯಂ ಅಪರಾಧೀಕರಣದಿಂದ ಇರುವ ರಕ್ಷಣೆ (ಪರಿಚ್ಛೇದ 21 ಮತ್ತು ಪರಿಚ್ಛೇದ 20 (3) ) ಜೊತೆಯಲ್ಲಿ ನೋಡಬೇಕಾಗುತ್ತದೆ. ಆಡಳಿತಾಧಿಕಾರಕ್ಕೆ ಒಬ್ಬ ವ್ಯಕ್ತಿಯ ಸಂವಿಧಾನಾತಕ ಹಕ್ಕುಗಳಿಗಾಗಲಿ ಸ್ವಾತಂತ್ರ್ಯಕ್ಕಾಗಲೀ, ಯಾವುದೇ ಹಕ್ಕಿಗಾಗಲೀ ಧಕ್ಕೆ ಮಾಡುವ ಅಧಿಕಾರ ಇಲ್ಲ. (ರಾಂ ಜವಯ್ಯ ಕಪೂರ್ (1995) 2 SCR 225 ನೋಡಿ). ನಿರ್ದಿಷ್ಟವಾದ ಒಂದು ಕಾಯ್ದೆ ಇಲ್ಲದಿರುವುದರಿಂದ, ಮೂಲಭೂತ ಹಕ್ಕುಗಳಿಗೆ ಯಾವುದೇ ರೀತಿಯ ಚ್ಯುತಿ ಮಾಡುವುದು ಸಾಂವಿಧಾನಿಕವಾಗಿ ಅಪರಾಧವಾಗುತ್ತದೆ. (ರಾಂ ಜವಯ್ಯ ಕಪೂರ್ (1955) 2 SCR 225; ಖಾರಕ್ ಸಿಂಗ್ (1964) 1 SCR 332 ಪುಟ 350; ಬೆನೆಟ್ ಕೋಲ್‌ಮನ್ (1972) ೨ ಎಸೀ ೨೮೮ ಪ್ಯಾರಾ 26-7; ಠಾಕೂರ್ ಭರತ್ ಸಿಂಗ್ (1967) 2 SCR 454 ಪುಟಗಳು 459-62;ಬಿಷಂಬರ್ ದಯಾಲ್ (1982) 3 SCR ಪುಟಗಳು 636-8; ಸತ್‌ವಂತ್ (1967) 3 SCR 525 ನೋಡಿ). ಸುಳ್ಳು ಪತ್ತೆ ಹಚ್ಚುವ ಪರೀಕ್ಷೆಗಳ ಮೂಲಕ ಪ್ರಶ್ನೆ ಮಾಡಲು ಮತ್ತು ಉತ್ತರ ಹೇಳಿಸಲು ಇರುವ ಅಧಿಕಾರ ಸಾಮಾನ್ಯ ಅಧಿಕಾರದಿಂದ ಬಂದಿರುವುದು ಎಂಬ ವಾದವನ್ನು ಸಮರ್ಥಿಸುವಂತೆ ಸುಳ್ಳು ಪತ್ತೆ ಹಚ್ಚುವ ಪರೀಕ್ಷೆ ಅತಿಕ್ರಮಣಕಾರಿಯಾದದ್ದು. (Cr. P.C.ಯ ಪರಿಚ್ಛೇದಗಳು 160-167).ಹೀಗಿದ್ದರೂ ಭಾರತದಲ್ಲಿ ಸಾಂವಿಧಾನಿಕ ಅತಿಕ್ರಮಣ ಹಾಗೂ ಪುರಾವೆಗೆ ಅನುಮತಿ ಇಲ್ಲದಿರುವುದು ಇವೆರಡನ್ನು ಇಟ್ಟು,

ನೋಡಿದರೆ, ಪರೀಕ್ಷೆ ನಡೆಸುವುದು ವ್ಯಕ್ತಿಯ ವಿಶೇಷಾವಕಾಶ/ಹಕ್ಕು ಹೊರತು ಪೋಲೀಸರ ಹೆಚ್ಚಳವಲ್ಲ ಎನ್ನುವುದನ್ನು ನಾವು ಕಾಣಬೇಕು. ಅತಿಕ್ರಮಣಕಾರಿಯಾದಂತಹ ಪರೀಕ್ಷೆಗಳಿಗೆ ಕಾನೂನಿನ ಬೆಂಬಲ ಇಲ್ಲದೆ ಇರುವುದರಿಂದ ಇದನ್ನು ಕಾನೂನುಬಾಹಿರವಾದದ್ದು ಹಾಗೂ ಸಂವಿಧಾನ ಬಾಹಿರವಾದದ್ದು ಎಂದು ಹೇಳಬಹುದು. ( ಒತ್ತಾಯವಿಲ್ಲದೆ ಸ್ವಯಂಸ್ಫೂರ್ತಿಯಿಂದ ಹೋಗುವುದನ್ನು ಹೊರತುಪಡಿಸಿದಂತೆ) ಸುಳ್ಳು ಪತ್ತೆ ಹಚ್ಚುವ ಪರೀಕ್ಷೆ ನಡೆಸುವ ಪೋಲೀಸರ ಕ್ರಮಕ್ಕೆ ಕಾನೂನಿನ ಅನುಮತಿ ಇಲ್ಲದಿದ್ದಲ್ಲಿ, ಅದನ್ನು ಸ್ವಯಂ ಮುಂದಾಗುವುದು ಎಂದು ಸಮರ್ಥಿಸಿಕೊಳ್ಳಬೇಕಾಗುತ್ತದೆ. ಇವೆರಡರ ನಡುವೆ ವ್ಯತ್ಯಾಸವಿದೆ. ಒಬ್ಬ ವ್ಯಕ್ತಿಗೆ ಸಿಗಬೇಕಾದ ಸಂವಿಧಾನಬದ್ಧ ರಕ್ಷಣೆಗಳ ದೃಷ್ಟಿಯಲ್ಲಿ ಈ ವ್ಯತ್ಯಾಸಕ್ಕೆ ಪ್ರಾಮುಖ್ಯತೆ ಇದೆ. ಒಬ್ಬ ವ್ಯಕ್ತಿ "ನನ್ನ ಹೆಸರನ್ನು ಸ್ಪಷ್ಟಪಡಿಸುವುದಕ್ಕೆ ನಾನು ಸುಳ್ಳು ಪತ್ತೆ ಮಾಡುವ ಪರೀಕ್ಷೆ ತೆಗೆದುಕೊಳ್ಳುವುದನ್ನು ಬಯಸುತ್ತೇನೆ" ಎಂದು ಹೇಳುವುದಕ್ಕೂ " ನಿನ್ನ ಹೆಸರನ್ನು ಸ್ಪಷ್ಟಪಡಿಸಬೇಕೆಂದಿದ್ದರೆ, ನೀನು ಸುಳ್ಳು ಪತ್ತೆ ಹಚ್ಚುವ ಪರೀಕ್ಷೆಯನ್ನು ತೆಗೆದುಕೋ" ಎಂದು ಪೋಲೀಸರು ಹೇಳುವುದಕ್ಕೂ ಬಹಳಷ್ಟು ವ್ಯತ್ಯಾಸವಿದೆ. ಇನ್ನೂ ಕೆಟ್ಟ ಪರಿಸ್ಥಿತಿ ಯಾವುದೆಂದರೆ, ಪೋಲೀಸರು " ಸುಳ್ಳು ಪತ್ತೆ ಹಚ್ಚುವ ಪರೀಕ್ಷೆಯನ್ನು ತೆಗೆದುಕೋ, ನಿನ್ನನ್ನು ನಾವು ಬಿಟ್ಟು ಬಿಡುತ್ತೇವೆ" ಎನ್ನುವುದು. ಮೊದಲನೆಯ ಉದಾಹರಣೆಯಲ್ಲಿ ವ್ಯಕ್ತಿ ಪರೀಕ್ಷೆಗೆ ಒಳಗಾಗಲು ಮುಂದೆ ಬರುತ್ತಾನೆ. ಆದರೆ, ಹಾಗೆ ಮುಂದೆ ಬರಲು ಆತನ/ಆಕೆಯ ಒತ್ತಾಯದ ಪರಿಸ್ಥಿತಿ ಇದೆಯೇ ಎನ್ನುವುದನ್ನು ಪರಿಶೀಲಿಸಬೇಕಾಗುತ್ತದೆ. ಎರಡನೆಯ ಮತ್ತು ಮೂರನೆಯ ಉದಾಹರಣೆಗಳಲ್ಲಿ, ಪೊಲೀಸ್ ಪರೋಕ್ಷವಾಗಿ (ಎರಡನೆಯ ಉದಾಹರಣೆಯಲ್ಲಿ) ಮತ್ತು ಪ್ರತ್ಯಕ್ಷವಾಗಿ (ಮೂರನೆಯ ಉದಾಹರಣೆಯಲ್ಲಿ) ಆಪಾದಿತನನ್ನು ವಿಮುಕ್ತಿಗೊಳಿಸುವ ಉದ್ದೇಶದಿಂದ ಸುಳ್ಳು ಪತ್ತೆ ಹ್ಚಚುವ ಪರೀಕ್ಷೆಯನ್ನು ನೋಡುತ್ತಾರೆ. ಯಾವ ತರಹದ ಹೇಳಿಕೆಯನ್ನು ಬಯಸುತ್ತಿದ್ದಾರೆ ಎನ್ನುವುದಕ್ಕೆ 'ಸ್ವಯಂ ಅಪರಾಧೀಕರಣ'ದ ವ್ಯಾಪ್ತಿ ಮತ್ತು ರೀತಿಯಿಂದ ಸಾಕಷ್ಟು ತಿಳಿದುಬರುತ್ತದೆ. ಎಂ. ಪಿ. ಶರ್ಮಾ ಪ್ರಕರಣದಲ್ಲಿ (AIR 1954 SC 300) ಸರ್ವೋಚ್ಚ ನ್ಯಾಯಾಲಯವು ಸ್ವಯಂ ಅಪರಾಧೀಕರಣದ ರಕ್ಷಣೆಯ ನಿಯಮದೊಳಗೆ, ಪುರಾವೆ ಇರುವ, ಇತ್ಯಾತ್ಮಕವಾದ ಎಲ್ಲಾ ಇಚ್ಛಾಪೂರ್ವಕವಾದ ನಡವಳಿಕೆಗಳನ್ನೂ ಸೇರಿಸಿದೆ. ಇದರಿಂದಲೇ ಎಲ್ಲಾ ತರಹದ ಪ್ರಶ್ನೆ ಹಾಕಿ ಪರೀಕ್ಷಿಸುವ (interrogation) ಕ್ರಿಯೆಯನ್ನು ಅಸಾಧ್ಯಗೊಳಿಸುತ್ತಿತ್ತು. ಕಾತಿ ಕಾಳು ಓಘಾದ್ ಪ್ರಕರಣದಲ್ಲಿ (AIR 1961 SC 1808) ಹೇಳಿರುವಂತೆ ಪರೀಕ್ಷೆಯು ವೈಯಕ್ತಿಕ ಇಚ್ಛೆಯ ಅವಶ್ಯಕತೆಯನ್ನು ಉಳಿಸುತ್ತದೆ. ಮತ್ತು ವಿವರ ನೀಡುವ ವ್ಯಕ್ತಿಯ ವೈಯಕ್ತಿಕ ಅರಿವಿನ ಆಧಾರದ ಮೇಲಿರುವ ವಿವರಗಳನ್ನು ನೀಡುವುದೇ 'ಸ್ವಯಂ ಅಪರಾಧೀಕರಣ'ದ ಅರ್ಥವೆಂದು ಅದು ಹೇಳುತ್ತದೆ. ಯಾವುದೇ ತರಹದ ಪರೀಕ್ಷೆಯೇ ಆಗಿರಲಿ, ಸುಳ್ಳು ಪತ್ತೆ ಹಚ್ಚುವ ಪರೀಕ್ಷೆಯಲ್ಲಿ ಸಿಗಬೇಕೆಂದು ಬಯಸಿರುವ ಮಾಹಿತಿ ಆಪಾದಿತನ ವೈಯಕ್ತಿಕ ಅರಿವಿನಲ್ಲಿರುವ ಮಾಹಿತಿಯಾಗಿರುತ್ತದೆ.

ಆಯೋಗವು ಬಹಳ ಪ್ರಮುಖವಾದ ಈ ವಿಚಾರಗಳನ್ನು ಜಾಗರೂಕತೆಯಿಂದ ಪರಿಗಣಿಸಿ ಸುಳ್ಳು ಪತ್ತೆ ಹಚ್ಚುವ ಪರೀಕ್ಷೆಯ ಕಾರ್ಯನಿರ್ವಹಣೆಯನ್ನು ಕುರಿತಂತೆ ಈ ಕೆಳಗಿನ ಮಾರ್ಗಸೂಚಿಗಳನ್ನು ಮುಂದಿರಿಸಿದೆ:

(i) ಆಪಾದಿತನ ಸಮ್ಮತಿಯ ಮೇರೆಗಲ್ಲದೆ ಸುಳ್ಳು ಪತ್ತೆಯ ಪರೀಕ್ಷೆಯ ಕಾರ್ಯ ನಿರ್ವಹಣೆ ಮಾಡಕೂಡದು. ಆಪಾದಿತನಿಗೆ ಇಂತಹ ಪರೀಕ್ಷೆಯೊಂದಕ್ಕೆ ಒಳಪಡುವ ಇಚ್ಛೆ ಇದೆಯೇ ಎಂಬ ಆಯ್ಕೆಯ ಅವಕಾಶ ನೀಡಬೇಕು.

(ii) ಒಂದು ವೇಳೆ ಆಪಾದಿತನು ಸುಳ್ಳು ಪತ್ತೆಯ ಪರೀಕ್ಷೆಗಾಗಿ ತಾನಾಗಿ ಮುಂದೆ ಬಂದಲ್ಲಿ, ಆತನಿಗೆ ವಕೀಲರ ಸಹಕಾರ ದೊರಕುವಂತೆ ಮಾಡಬೇಕು. ಮಾತ್ರವಲ್ಲದೆ ಇಂತಹ ಒಂದು ಪರೀಕ್ಷೆಯಿಂದ ಬಂದೊದಗಬಹುದಾದ ದೈಹಿಕ, ಮಾನಸಿಕ ಹಾಗೂ ಕಾನೂನಿನ ಪರಿಣಾಮಗಳನ್ನು ಆತನಿಗೆ ಪೋಲೀಸರು ಹಾಗೂ ವಕೀಲರು ವಿವರಿಸಬೇಕು.

(iii) ಜ್ಯುಡಿಷಿಯಲ್ ಮ್ಯಾಜಿಸ್ಟ್ರೇಟರ ಮುಂದೆ ಆತನ ಸಮ್ಮತಿಯನ್ನು ದಾಖಲಿಸಿರಬೇಕು.

(iv) ಮ್ಯಾಜಿಸ್ಟ್ರೇಟರ ಮುಂದೆ ನಡೆಯುವ ವಿಚಾರಣೆಯ ಸಂದರ್ಭದಲ್ಲಿ, ಒಪ್ಪಿಗೆ ನೀಡಿದನೆನ್ನಲಾಗಿರುವ ವ್ಯಕ್ತಿಯನ್ನು ವಕೀಲನೊಬ್ಬನು ಪ್ರತಿನಿಧಿಸಬೇಕು.

(v) ವಿಚಾರಣೆಯಲ್ಲಿ, ನೀಡಲಾಗುವ ಹೇಳಿಕೆಯು "ತಪ್ಪೊಪ್ಪಿಗೆಯ" ಹೇಳಿಕೆಯಾಗಿರುವುದಿಲ್ಲ ಬದಲಿಗೆ ಪೋಲೀಸರ ಮುಂದೆ ಕೊಡುವ ಹೇಳಿಕೆಯಾಗಿರುತ್ತದೆ ಎಂಬುದನ್ನು ಪ್ರಶ್ನಿಸಲ್ಪಡುವ ವ್ಯಕ್ತಿಗೆ ಹೇಳಿರಬೇಕು.

(vi) ಬಂಧನದಲ್ಲಿ ಎಷ್ಟು ದಿನ ಇರಬೇಕು ಮತ್ತು ಪ್ರಶ್ನೆ ಹಾಕಿ ಪರೀಕ್ಷಿಸುವ ಬಗೆ ಯಾವುದು ಎಂಬ ಬಂಧನಕ್ಕೆ ಸಂಬಂಧಿಸಿದ ಎಲ್ಲ ಅಂಶಗಳನ್ನು ಮ್ಯಾಜಿಸ್ಟ್ರೇಟರು ಪರಿಗಣಿಸುತ್ತಾರೆ.

(vii) ಸುಳ್ಳು ಪತ್ತೆ ಹಚ್ಚುವ ಪರೀಕ್ಷೆಯ ವಾಸ್ತವ ದಾಖಲೀಕರಣವು ಒಂದು ಸ್ವತಂತ್ರ ಸಂಸ್ಥೆಯಲ್ಲಿ (ಆಸ್ಪತ್ರೆಯಂತಹ) ವಕೀಲರ ಮುಂದೆ ನಡೆಯಬೇಕು.

(viii) ಒಂದು ಸಂಪೂರ್ಣವಾದ ವೈದ್ಯಕೀಯ ಮತ್ತು ವಾಸ್ತವಿಕ ಸಂಗತಿಯನ್ನು ಕುರಿತ ವೃತ್ತಾಂತದ ಮಾಹಿತಿಯನ್ನು ಪಡೆದ ಬಗೆಯನ್ನು ದಾಖಲಿಸಿಕೊಳ್ಳತಕ್ಕದ್ದು.

# ಭೂಕಂದಾಯದ ಬಾಕಿ ವಸೂಲಾತಿಗಾಗಿ ಬಂಧಿಸಲ್ಪಟ್ಟಿರುವ ರೈತರ ಕುರಿತು ಎಲ್ಲ ರಾಜ್ಯಗಳ ಮುಖ್ಯ ಕಾರ್ಯದರ್ಶಿಗಳಿಗೆ ಬರೆಯಲಾಗಿರುವ ಪತ್ರ

**ಎನ್. ಗೋಪಾಲ ಸ್ವಾಮಿ ಭಾ.ಆ.ಸೇ. ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ**

ಮಹಾ ಕಾರ್ಯದರ್ಶಿಗಳು

ನವೆಂಬರ್ 21, 2000

ಆತ್ಮೀಯರಾದ,

ಭೂಕಂದಾಯ ಪಾವತಿಗೆ ಸಂಬಂಧಿಸಿದಂತೆ ರೈತರನ್ನು ವಶಕ್ಕೆ ತೆಗೆದುಕೊಂಡಿರುವುದಕ್ಕೆ ಮತ್ತು ಬಂಧನದಲ್ಲಿರಿಸಿರುವುದಕ್ಕೆ ಸಂಬಂಧಿಸಿದಂತೆ ಆಯೋಗವು ಇತ್ತೀಚೆಗೆ ತೀರ್ಮಾನಿಸಿದ ಎರಡು ಪ್ರಕರಣಗಳನ್ನು ಕುರಿತ ಆಯೋಗದ ನಡಾವಳಿಯನ್ನು ಈ ಮೂಲಕ ತಮಗೆ ಕಳುಹಿಸಿ ಕೊಡುತ್ತಿದ್ದೇನೆ. ಈ ತೀರ್ಮಾನದಲ್ಲಿ ಸ್ಪಷ್ಟವಾಗಿ ಹೇಳಿರುವಂತೆ, ರೈತರು ತಿಳಿದೂ ತಿಳಿದೂ ಕಂದಾಯ ಪಾವತಿ ಮಾಡದೆ ಉಳಿದಿರುವುದು ಪುರಾವೆ ಸಹಿತವಾಗಿ ತಿಳಿದು ಬಂದಿರುವ ಘಟನೆಗಳನ್ನು ಹೊರತುಪಡಿಸಿದಂತೆ, ಈ ರೀತಿಯಲ್ಲಿ ವಶಕ್ಕೆ ತೆಗೆದುಕೊಳ್ಳುವುದು ಅಥವಾ ಬಂಧನದಲ್ಲಿರಿಸುವುದು ಸಂವಿಧಾನದ ಪರಿಚ್ಛೇದ 21ರಲ್ಲಿ ನೀಡಲಾಗಿರುವ ಅವಕಾಶವನ್ನು ದಾರುಣವಾಗಿ ಉಲ್ಲಂಘಿಸುತ್ತದೆ ಎಂದು 1980ರಲ್ಲಿ ನಡೆದ ಪ್ರಕರಣವೊಂದಕ್ಕೆ ಸಂಬಂಧಿಸಿದಂತೆ ಸರ್ವೋಚ್ಚ ನ್ಯಾಯಾಲಯ ನೀಡಿರುವ ತೀರ್ಪು ಬಹುತೇಕ ಕಂದಾಯ ಅಧಿಕಾರಿಗಳು ತಿಳಿದಿರಲಿಕ್ಕಿಲ್ಲ. ಉತ್ತರ ಪ್ರದೇಶದಿಂದ ವರದಿಯಾದ ಎರಡು ಪ್ರಕರಣಗಳಿಗೆ ಸಂಬಂಧಿಸಿದ ಆಯೋಗದ ನಡಾವಳಿಯನ್ನು ಮಾಹಿತಿಗಾಗಿ ಇಲ್ಲಿ ಅಡಕಗೊಳಿಸಲಾಗಿದೆ. ಇದನ್ನು ತಮ್ಮ ರಾಜ್ಯದ ಕಂದಾಯ ಇಲಾಖೆಯ ಅಧಿಕಾರಿಗಳ ಗಮನಕ್ಕೆ ತರಬೇಕೆಂದು ತಮ್ಮನ್ನು ಕೋರಲಾಗಿದೆ.

ತಮ್ಮ ವಿಶ್ವಾಸಿ,

ಸಹಿ/-

**(ಎನ್. ಗೋಪಾಲಸ್ವಾಮಿ)**

ಶ್ರೀ ಬಿ. ಎನ್. ತಿವಾರಿ,
ಮುಖ್ಯ ಕಾರ್ಯದರ್ಶಿಗಳು,
ಉತ್ತರ ಪ್ರದೇಶ ಸರ್ಕಾರ,
ಲಕ್ನೋ.

ಪ್ರತಿಗಳನ್ನು ಎಲ್ಲ ಮುಖ್ಯ ಕಾರ್ಯದರ್ಶಿಗಳಿಗೆ ಮಾಹಿತಿಗಾಗಿ ಹಾಗೂ ಸೂಕ್ತ ಕ್ರಮಕ್ಕಾಗಿ ರವಾನಿಸಲಾಗಿದೆ.

# ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ
## ಸರ್ದಾರ್ ಪಟೇಲ್ ಭವನ
### ನವ ದೆಹಲಿ

| | | |
|---|---|---|
| ಆಪಾದಕರ ಹೆಸರು | : | ಶ್ರೀ ಶಾರ್‌ದಾ ಬೇಲ್ವಿ |
| ಪ್ರಕರಣ ಸಂ. | : | 19265/96-97 (24/7786/96-ಎಲ್‌ಡಿ) |
| ದಿನಾಂಕ | : | 21ನೇ ಆಗಸ್ಟ್, 2000 |
| ಕೋರಂ | : | ನ್ಯಾಯಮೂರ್ತಿ ಜೆ. ಎಸ್. ವರ್ಮಾ, ಅಧ್ಯಕ್ಷರು |

## ನಡಾವಳಿ

ಜಲೌನ್ ಜಿಲ್ಲೆಯ ರಾಷ್ಟ್ರೀಯ ಸಂಯೋಜಕ್ ಸಂಘ ಸಮಿತಿಯ ಶ್ರೀ ಶಾರ್‌ದಾ ಬೇಲ್ವಿಯವರಿಂದ ಆಯೋಗವು ದೂರೊಂದನ್ನು ಸ್ವೀಕರಿಸಿದೆ. ಈ ದೂರು ಅರ್ಜಿಯೊಂದಿಗೆ "ಬೇಮೋಸ್ಮಿ ರಾಗ್ ವಸೂಲೀ ಕಾ" ಶಿರೋನಾಮೆಯಡಿಯಲ್ಲಿ 'ವಿ ಚಾರ್ ಸೂಚಕ್' ಎಂಬ ಹಿಂದಿ ವಾರ ಪತ್ರಿಕೆಯೊಂದರ ಪತ್ರಿಕಾ ವರದಿಯನ್ನು ಲಗತ್ತಿಸಲಾಗಿದೆ. ಅದರಲ್ಲಿ ಹಲವು ಮಂದಿ ರೈತರನ್ನು ವಶಕ್ಕೆ ತೆಗೆದುಕೊಂಡು ತಾತ್ಕಾಲಿಕವಾಗಿ ನಿರ್ಮಿಸಲಾದ ಕಾರಾಗೃಹಗಳಲ್ಲಿ ಅವರಿಂದ ತೆರಿಗೆಯ ಬಾಕಿ ವಸೂಲಿಯ ಉದ್ದೇಶದಿಂದ ಇರಿಸಲಾಗಿದೆ ಎಂದು ಹೇಳಲಾಗಿದೆ. ಬಂಧನದಲ್ಲಿ ಇರುವ ರೈತರಿಗೆ ಸರಿಯಾದ ಊಟದ ವ್ಯವಸ್ಥೆ ಮಾಡಲಾಗಿಲ್ಲ. ವ್ಯಕ್ತಿಯೊಬ್ಬರಿಗೆ ದಿನಕ್ಕೆ 50 ಪೈಸೆ ಖರ್ಚಿನ ದರದಲ್ಲಿ ತಿನ್ನಲು ಕೊಡಲಾಗಿದೆ ಎಂದೂ ಅದರಲ್ಲಿ ಹೇಳಲಾಗಿದೆ. ಇದನ್ನು ಓದಿದ ಆಯೋಗ ಆಘಾತಕ್ಕೆ ಒಳಗಾಗಿದೆ.

ಜಲೌನ್ ಜಿಲ್ಲೆಯ ಜಿಲ್ಲಾ ಮ್ಯಾಜಿಸ್ಟ್ರೇಟರಿಗೆ ಆಯೋಗವು ನೋಟೀಸೊಂದನ್ನು ಜಾರಿ ಮಾಡಿ ಈ ವಿಚಾರದ ಬಗ್ಗೆ ವರದಿ ನೀಡುವಂತೆ ಕೇಳಿದೆ. ಕಾಲ್‌ಪಿಯ ಸಬ್ ಡಿವಿಷನಲ್ ಜಿಲ್ಲಾ ಮ್ಯಾಜಿಸ್ಟ್ರೇಟರ ಮೂಲಕ ಜಿಲ್ಲಾ ಮ್ಯಾಜಿಸ್ಟ್ರೇಟರು ಪ್ರಕರಣದ ತನಿಖೆ ಕೈಗೊಳ್ಳುವಂತೆ ಮಾಡಿರುವರೆಂದು ತೋರುತ್ತದೆ. ಇದರ ಆಧಾರದ ಮೇಲೆ, ತೆರಿಗೆ ಪಾವತಿಸದೆ ತಪ್ಪಿಸಕೊಂಡಿರುವ ರೈತರ ಬಾಕಿ ವಸೂಲಾತಿಗಾಗಿ ಜಿಲ್ಲಾ ಆಡಳಿತವು 1997ನೇ ಮಾರ್ಚ್ ತಿಂಗಳಿನಲ್ಲಿ ಕ್ರಮವೊಂದನ್ನು ಜರುಗಿಸಿರುವುದಾಗಿ ಅವರ ಈ ವರದಿ ಹೇಳುತ್ತದೆ. ಬಾಕಿ ವಸೂಲಿಗಾಗಿ, ಸಮರ್ಪಕವಾದ ಕಾನೂನು ಕ್ರಮವನ್ನುಸರಿಸಿ, ವಾರಂಟ್‌ನ ನಿರ್ದೇಶನದ ಮೇರೆಗೆ ತೆರಿಗೆ ಪಾವತಿಸದೆ ಉಳಿದಿರುವ ರೈತರನ್ನು ವಶಕ್ಕೆ ತೆಗೆದುಕೊಂಡಿರಬಹುದಾಗಿದ್ದು, ಅವರನ್ನು ಲಾಕಪ್‌ಗಳಲ್ಲಿ ಇರಿಸಲಾಗಿದೆ. ಬಂಧನಕ್ಕೊಳಗಾಗಿರುವ ರೈತರ ಕುಟುಂಬದ ಸದಸ್ಯರು/ ಸಂಬಂಧಿಕರು ಅವರ ಆಹಾರ ಮತ್ತಿತರ ಅಗತ್ಯ ವಸ್ತುಗಳ ಪೂರೈಕೆಯ ವ್ಯವಸ್ಥೆ ಮಾಡಿರುತ್ತಾರೆ. ಇಂತಹ ವ್ಯವಸ್ಥೆಗಳನ್ನು ಪಡೆಯಲಾಗದ ರೈತರಿಗೆ ರಾಜ್ಯಾಡಳಿತದಿಂದ ಆಹಾರ ಇತ್ಯಾದಿ ಒದಗಿಸಲಾಗಿದೆ

ಎಂಬುದನ್ನು ಜಿಲ್ಲಾ ಮ್ಯಾಜಿಸ್ಟ್ರೇಟರು ಒಪ್ಪಿಕೊಂಡಿದ್ದು, ಆದರೆ, ನೀರಿನ ಕೊರತೆಯಿಂದಾಗಿ/ ನೀರಾವರಿ ವ್ಯವಸ್ಥೆಯಲ್ಲಿನ ಕೊರತೆಯಿಂದಾಗಿ ರೈತರ ಬೆಳೆ ಸುಟ್ಟು ಹೋಗಿರಬಹುದಾದ ಯಾವುದೇ ಘಟನೆಯನ್ನು ಅಲ್ಲಗಳೆದಿದ್ದಾರೆ.

ಈ ಪ್ರಕರಣದ ವಾಸ್ತವಿಕ ಸಂಗತಿಗಳಿಂದ ಹಾಗೂ ಸನ್ನಿವೇಶಗಳಿಂದ ವ್ಯಕ್ತವಾಗಿರುವ ಸಂಬಂಧಪಟ್ಟ ಅಧಿಕಾರಿಗಳ ನಿರ್ದಯತೆ ಹಾಗೂ ಇಂತಹ ಪರಿಸ್ಥಿತಿಯ ಕುರಿತು ಸರ್ವೋಚ್ಚ ನ್ಯಾಯಾಲಯ ಬಹಳ ಹಿಂದೆಯೇ ಮುಂದಿಟ್ಟಿರುವ ಕಾನೂನಿನ ಬಗ್ಗೆ ಅವರಿಗೆ ತಿಳುವಳಿಕೆಯೇ ಇಲ್ಲದಿರುವುದರ ಕುರಿತು ಆಯೋಗವು ಆತಂಕ ವ್ಯಕ್ತಪಡಿಸಿದೆ. ಜೋಲ್ಲಿ ವರ್ಗೀಸ್ ಮತ್ತು ದಿ ಬ್ಯಾಂಕ್ ಆಫ್ ಕೊಚಿನ್ ನಡುವಣ ಪ್ರಕರಣದ ತೀರ್ಪಿನಲ್ಲಿ (ಆಲ್ ಇಂಡಿಯಾ ರಿಪೋರ್ಟ್ 1980 ಎಸ್. ಸಿ. 470) ಸರ್ವೋಚ್ಚ ನ್ಯಾಯಾಲಯವು ಕರಾರಿನ ಬಾಧ್ಯತೆಯ ಪ್ರಕಾರವಾಗಿ ಮರುಪಾವತಿಸಲು ತಪ್ಪಿಸಿಕೊಂಡವರೊಂದಿಗೆ ವ್ಯವಹರಿಸಬೇಕಾದ ಬಗೆಯನ್ನು ಮುಂದಿರಿಸುತ್ತದೆ. ಜಸ್ಟಿಸ್ ಕೃಷ್ಣ ಅಯ್ಯರ್ ಅವರು ಐಸಿಸಿಪಿಆರ್‌ನ ಪರಿಚ್ಛೇದ 11ರ ಸಂದರ್ಭದಲ್ಲಿ ನಾಗರಿಕ ಕ್ರಮಗಳ ಸಂಹಿತೆಯ ಪರಿಚ್ಛೇದ 51 ಮತ್ತು ಆದೇಶ 21 ನಿಯಮ 37ರಲ್ಲಿ ನೀಡಲಾಗಿರುವ ಅವಕಾಶಗಳನ್ನು ಗ್ರಹಿಸಿರುವಂತೆ:

"ಸಾಕಷ್ಟು ಆದಾಯವಿದ್ದೂ ಮನಃಪೂರ್ವಕವಾಗಿಯೇ ಕಂದಾಯ ಪಾವತಿಸಲು ತಪ್ಪಿದ್ದಲ್ಲಿ ಮತ್ತು ಕ್ಯಾನ್ಸರ್ ಅಥವಾ ಇತರ ತೀವ್ರ ಕಾಯಿಲೆಗಳ ವೈದ್ಯಕೀಯ ತೀವ್ರ ಅಗತ್ಯದ ವೆಚ್ಚಗಳಂತಹ ಇನ್ನಾವುದೇ ವೆಚ್ಚವನ್ನು ಭರಿಸುವಂತಹ ತೀವ್ರ ಒತ್ತಡವಿರದಿದ್ದಲ್ಲಿ , ಈ ಕಾರಣಗಳಿಗಾಗಿ ಪಾವತಿಸದಿರುವುದಕ್ಕೆ ಸೂಕ್ತ ಪುರಾವೆಗಳಿದ್ದಲ್ಲಿ - ಇಂತಹ ಸಂದರ್ಭಗಳನ್ನು ಹೊರತು ಪಡಿಸಿ _ ವ್ಯಕ್ತಿಯೊಬ್ಬನನ್ನು ಸೆರೆಮನೆಗೆ ತಳ್ಳುವುದರ ಮೂಲಕ ಸಾಲ ವಸೂಲಾತಿ ಮಾಡುವ ಕ್ರಮವು ಪರಿಚ್ಛೇದ 21ರಲ್ಲಿ ನೀಡಲಾಗಿರುವ ಅವಕಾಶದ ದಾರುಣ ಉಲ್ಲಂಘನೆಯಾಗಿರುತ್ತದೆ".

ಆ ನ್ಯಾಯ ತೀರ್ಪು ಮುಂದುವರೆದು ಈ ಕೆಳಗಿನಂತೆ ಹೇಳುತ್ತದೆ:

"ಕೇವಲ ತೆರಿಗೆ ಪಾವತಿಸದಂತೆ ತಪ್ಪಿಸಿಕೊಳ್ಳುವುದು ಮಾತ್ರ ಸಾಲದು, ಪಾವತಿಸುವುದರ ಬಗೆಗಿನ ಉಪೇಕ್ಷೆಯನ್ನು ಮೀರಿದ ಅವಿಧೇಯತೆಗೆ ಸಂಬಂಧಿಸಿದ ಅಂಶ ಅದರಲ್ಲಿ ಇರಬೇಕು. ಹಿಂದಿನಿಂದಲೂ ನಡೆದು ಬಂದ ಉದ್ದೇಶಪೂರ್ವಕವಾದ ಪ್ರತಿಭಟನೆಯ ಪ್ರವೃತ್ತಿ ಅಥವಾ ಪಾವತಿಸಲು ತಪ್ಪಿರುವುದು ಮಾತ್ರವೇ ಅಲ್ಲದೆ, ಸಾಕಷ್ಟು ಆದಾಯವಿದ್ದೂ, ಶಾಸನಬದ್ಧವಾದ ತನ್ನ ಬಾಧ್ಯತೆಯನ್ನು ಅಪ್ರಾಮಾಣಿಕವಾಗಿ ತನ್ನದಲ್ಲವೆನ್ನುವಂತಹ, ಬೇಕೆಂತಲೇ ನಿರಾಕರಿಸುವ ಒಂದು ನಡವಳಿಕೆ ಸಾಬೀತಾಗಬೇಕು ಈ ಅವಕಾಶ ಒತ್ತಿ ಹೇಳುತ್ತದೆ. ಇಲ್ಲಿ ಸಾಲಗಾರನ ಇತರ ತೀವ್ರ ಅವಶ್ಯಕತೆಗಳು ಹಾಗೂ ಪ್ರಯಾಸಕರವಾದ ಸನ್ನಿವೇಶಗಳು ಪ್ರಮುಖ ಪಾತ್ರ ವಹಿಸುತ್ತವೆ."

ಆದ್ದರಿಂದ ಕರಾರಿನನ್ವಯ ಇರುವ ಸಾಲದ ಹೊರೆಯನ್ನು ಪಾವತಿಸಲು ತಪ್ಪುವುದರ ಬಗೆಗೆ ಸರಿಯಾದ ವಿಚಾರಣೆ ನಡೆದು ಒಂದು ತೀರ್ಮಾನಕ್ಕೆ ಬರದೆ ಅಂದರೆ ಸಾಲ ಮರುಪಾವತಿಯಲ್ಲಿ ತನ್ನ ಬಾಧ್ಯತೆಯನ್ನು ನಿರಾಕರಿಸುವಂತಹ ಅವಿಧೇಯತೆ ಕಂಡು ಬರದ ಹೊರತು ಕೇವಲ ಸಾಲ ಮರುಪಾವತಿಸದಿರುವುದಕ್ಕಾಗಿ ಮಾತ್ರವೇ ಸಾಲ ಮರುಪಾವತಿಸಲು ತಪ್ಪಿದವರನ್ನು ಬಂಧಿಸಲು ಬರುವುದು ಸ್ಪಷ್ಟವಾಗಿದೆ. ಪ್ರಸ್ತುತ ಪ್ರಕರಣದಲ್ಲಿ ವಾಸ್ತವ ಸಮಸ್ಯೆಯನ್ನು ಪರಿಶೀಲಿಸಿ ಇಂತಹ ಒಂದು ತೀರ್ಮಾನಕ್ಕೆ

ಬರುವ ಪ್ರಯತ್ನವನ್ನು ಮಾಡಲಾಗಿಲ್ಲ. ಇಂತಹ ಒಂದು ವಿಚಾರಣೆಯನ್ನು ತಹಸೀಲ್ದಾರರಾಗಲೀ, ಇನ್ನಿತರ ಅಧಿಕಾರಿಗಳಾಗಲೀ ಮಾಡಿಲ್ಲ. ತನ್ನ ಬಾಧ್ಯತೆಯನ್ನು ತನ್ನದಲ್ಲವೆನ್ನುವ ಅಪ್ರಾಮಾಣೀಕತೆಯು ಈ ಸಾಲ ಮರು ಪಾವತಿಸಲು ತಪ್ಪಿರುವುದರಲ್ಲಿ ಕಂಡು ಬಂದಿಲ್ಲ ಎನ್ನುವುದು ನ್ಯಾಯಾಧಿಕಾರಕ್ಕೆ ಸಂಬಂಧಿಸಿದ ವಾಸ್ತವವಾಗಿದ್ದು ಅದಿಲ್ಲದೆ ಅಂತಹವರನ್ನು ಬಂಧಿಸಲು ಅವಕಾಶವಿಲ್ಲ.

ಈ ಮೇಲಿನ ಕಾರಣಗಳಿಗಾಗಿ, ಅಗತ್ಯವಿದ್ದಷ್ಟು ಹಾಗೂ ಸರಿಯಾದ ಆಹಾರವನ್ನು ಕೊಡದೇ ಹಲವಾರು ರೈತರನ್ನು ಸುಮಾರು ಎರಡು ವಾರಗಳಷ್ಟು ಕಾಲ ಬಂಧನದಲ್ಲಿ ಇರಿಸಿದ್ದು ಅನ್ಯಾಯವೆಂದು ಆಯೋಗ ಅಭಿಪ್ರಾಯ ಪಡುತ್ತದೆ. ರೈತರು ಬಂಧನದಲ್ಲಿದ್ದಾಗ ಅವರಿಗೆ ಸರಿಯಾದ ಆಹಾರವನ್ನು ನೀಡಬೇಕಾಗಿದ್ದುದು ಸರ್ಕಾರದ ಹೊಣೆಯಾಗಿದ್ದು, ಸಂಬಂಧಿಕರು ಹಾಗೂ ಸ್ನೇಹಿತರು ಬಂಧಿತರಿಗೆ ಊಟದ ವ್ಯವಸ್ಥೆ ಮಾಡಿದರೆಂದು ಸರ್ಕಾರಿ ಅಧಿಕಾರಿಗಳು ಅದರಿಂದ ತಪ್ಪಿಸಿಕೊಳ್ಳುವಂತಿಲ್ಲ. ಊಟಕ್ಕೆಂದು ನಿಗದಿ ಪಡಿಸಲಾಗಿರುವ ತಲಾ 50 ಪೈಸೆಯು ಹಲವು ದಶಕಗಳ ಹಿಂದೆ ನಿಗದಿಗೊಳಿಸಲ್ಪಟ್ಟ ಮೊತ್ತವಾಗಿದ್ದು, ಈ ಮೊತ್ತವು ಒಂದು ಹೊತ್ತಿನ ಊಟಕ್ಕೂ ಎಟುಕುವಂತಹದ್ದಲ್ಲ. ಹಾಗಿರುವಾಗ ಎರಡು ಹೊತ್ತಿನ ಊಟವನ್ನು ಈ ಮೊತ್ತದಿಂದ ಒದಗಿಸುವ ಮಾತೆಲ್ಲಿಯದು.

ಆದ್ದರಿಂದ ಆಯೋಗವು ಉತ್ತರ ಪ್ರದೇಶ ರಾಜ್ಯ ಸರ್ಕಾರಕ್ಕೆ ಅದರ ಮುಖ್ಯ ಕಾರ್ಯದರ್ಶಿಗಳ ಮೂಲಕ ಈ ಕೆಳಗಿನ ಶಿಫಾರಸ್ಸುಗಳನ್ನು ಮಾಡುತ್ತದೆ:

(i) 1997ರ ಮಾರ್ಚ್ ತಿಂಗಳ ಅವಧಿಯಲ್ಲಿ ತಾಲ್ಲೂಕಿನ ತಾತ್ಕಾಲಿಕ ಬಂದೀಖಾನೆಗಳಲ್ಲಿ ಸೆರೆಯಲ್ಲಿರಿಸಲಾಗಿದ್ದ ಪ್ರತಿಯೊಬ್ಬ ವ್ಯಕ್ತಿಗೂ ತತ್‌ಕ್ಷಣದ ತಾತ್ಕಾಲಿಕ ಪರಿಹಾರದ ಮೊತ್ತವಾಗಿ ರೂ. 10,000/-ವನ್ನು ನೀಡಬೇಕು.

(ii) ಭೂಕಂದಾಯ ಮತ್ತಿತರ ಮರುಪಾವತಿಗಳನ್ನು ಮಾಡಿಸಿಕೊಳ್ಳುವ ಜವಾಬ್ದಾರಿ ವಹಿಸಲ್ಪಟ್ಟಿರುವ ಸಂಬಂಧಪಟ್ಟ ಅಧಿಕಾರಿಗಳ ಉಪಯೋಗಕ್ಕಾಗಿ ಮೇಲೆ ಹೇಳಿದ ಸರ್ವೋಚ್ಚ ನ್ಯಾಯಾಲಯದ ತೀರ್ಪಿಗೆ ಸರಿಹೊಂದುವಂತಹ ಮಾರ್ಗಸೂಚಿಗಳನ್ನು ರಚಿಸಬೇಕು.

(iii) ಬಂದೀಖಾನೆಯಲ್ಲಿರುವ ನಾಗರಿಕ ಖೈದಿಗಳ ಊಟದ ವ್ಯವಸ್ಥೆ ಮಾಡಲು ನಿಗದಿ ಪಡಿಸಲಾಗಿರುವ ಈಗಿನ ಮೊತ್ತವು ಸಾಲದೆ ಹೋದಲ್ಲಿ ಪರಿಷ್ಕರಿತ ಮೊತ್ತವನ್ನು ನಿಗದಿಪಡಿಸಬೇಕು.

ಆರು ತಿಂಗಳುಗಳೊಳಗಾಗಿ ಅನುಸರಣಾ ವರದಿಯನ್ನು ಸಿದ್ಧಪಡಿಸುವುದು.

ಸಹಿ/-

(ನ್ಯಾಯಮೂರ್ತಿ ಜೆ. ಎಸ್. ವರ್ಮಾ)

ಅಧ್ಯಕ್ಷರು.

# ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ
## ಸರ್ದಾರ್ ಪಟೇಲ್ ಭವನ
## ನವ ದೆಹಲಿ

| | | |
|---|---|---|
| ಆಪಾದಕರ ಹೆಸರು | : | ಶ್ರೀ ಶಾರ್‌ದಾ ಬೇಲ್ವಿ |
| ಪ್ರಕರಣದ ಸಂ. | : | 6299124198-99/ಎಸಿಡಿ |
| ದಿನಾಂಕ | : | 12ನೇ ಜುಲೈ, 2000 |
| ಕೋರಂ | : | ನ್ಯಾಯಮೂರ್ತಿ ಶ್ರೀ ಜೆ. ಎಸ್. ವರ್ಮಾ, ಅಧ್ಯಕ್ಷರು |

### ನಡಾವಳಿಗಳು

ಸಾಮಾಜಿಕ ಕಾರ್ಯಕರ್ತರಾದ ಶ್ರೀ ಶಾರ್‌ದಾ ಬೇಲ್ವಿಯವರು ನೀಡಿರುವ ದೂರಿನ ಮೇರೆಗೆ ಪ್ರಕರಣವೊಂದನ್ನು ದಾಖಲಿಸಲಾಗಿದೆ. ದೂರು ಅರ್ಜಿಯೊಂದಿಗೆ ದಿನಾಂಕ 3ನೇ ಜೂನ್ 1998ರ 'ಅಮರ್ ಉಜಾಲಾ' ಹಿಂದಿ ದಿನ ಪತ್ರಿಕೆಯಲ್ಲಿ ಪ್ರಕಟವಾದ ಪತ್ರಿಕಾ ವರದಿಯೊಂದನ್ನು ಲಗತ್ತಿಸಲಾಗಿದೆ. ಈ ವರದಿಯ ಪ್ರಕಾರ ಉತ್ತರ ಪ್ರದೇಶದ ಒರೈ (ಜಲೌನ್) ಜಿಲ್ಲೆಯ, ಕೋಂಚ್ ಪೊಲೀಸ್ ಠಾಣಾ ವ್ಯಾಪ್ತಿಯ, ತಹಾರ್ ಪುರ ಗ್ರಾಮದ 75 ವರ್ಷ ವಯಸ್ಸಿನ ಪಾರ್‌ಮೈ ಎಂಬ ವ್ಯಕ್ತಿಯು ಬಂಧನದಲ್ಲಿದ್ದಾಗ ಹಸಿವು ಹಾಗೂ ನೀರಡಿಕೆಯಿಂದ ಅಸು ನೀಗಿದ್ದಾನೆ. ಕೇವಲ ರೂ.4,000/- ಭೂ ಕಂದಾಯ ಬಾಕಿ ಪಾವತಿಸಿಲ್ಲ ಎಂಬ ಕಾರಣಕ್ಕಾಗಿ ಆತನನ್ನು ಬಂಧಿಸಲಾಗಿತ್ತು. ಆತನನ್ನು ತಾಲ್ಲೂಕಿನ ತಹಸೀಲ್ದಾರರಾದ ವೀರೇಂದ್ರ ಗುಪ್ತಾ ಹಾಗೂ ಇತರ ನೌಕರರು 23ನೇ ಮೇ 1998ರಂದು ತಮ್ಮ ವಶಕ್ಕೆ ತೆಗೆದುಕೊಂಡು ತಾಲ್ಲೂಕಿನ ಲಾಕಪ್‌ನಲ್ಲಿಟ್ಟರು. ಆತ 1ನೇ/2ನೇ ಜೂನ್ 1998ರಂದು ನೀರಿಗಾಗಿ ಹಾತೊರೆದು ನೀರಡಿಕೆಯಿಂದ ಅಸು ನೀಗಿದ್ದಾನೆಂದು ಹೇಳಲಾಗಿದೆ. ಶವ ಪರೀಕ್ಷೆಯಿಂದ ದೇಹದ ಮೇಲೆ ಅಥವಾ ದೇಹದ ಒಳಭಾಗದಲ್ಲಿ ಯಾವುದೇ ವಿಧವಾದ ಪೆಟ್ಟುಗಳಾಗಿರುವುದು ವ್ಯಕ್ತವಾಗಿಲ್ಲ. ಸಾವಿಗೆ ನಿಖರ ಕಾರಣ ಸೂಚಿಸಲ್ಪಟ್ಟಿಲ್ಲ.

ಆಯೋಗ ಜಾರಿ ಮಾಡಿದ ಪ್ರಕಟಣೆಗೆ ಉತ್ತರವಾಗಿ ಜಲೌನ್ ಜಿಲ್ಲೆಯ ಜಿಲ್ಲಾ ಮ್ಯಾಜಿಸ್ಟ್ರೇಟರು ಭೂ ಅಭಿವೃದ್ಧಿ ಬ್ಯಾಂಕಿನ ಸಾಲದ ಮರು ಪಾವತಿಯನ್ನು ಭೂ ಕಂದಾಯವಾಗಿ ವಸೂಲಿ ಮಾಡುವುದಕ್ಕಾಗಿ ಪಾರ್‌ಮೈಯನ್ನು 1998ನೇ ಮೇ 23ರಂದು ಬಂಧಿಸಿ ತಾಲ್ಲೂಕಾ ಲಾಕಪ್‌ನಲ್ಲಿ ಇರಿಸಿದ್ದಾಗಿ ಒಪ್ಪಿಕೊಂಡಿದ್ದಾರೆ. ಮರುಪಾವತಿಸದೆ ತಪ್ಪಿಸಿಕೊಂಡಿದ್ದ ಬ್ಯಾಂಕ್ ಸಾಲವನ್ನು ಭೂ ಕಂದಾಯದ ರೂಪದಲ್ಲಿ ವಸೂಲಿ ಮಾಡಬಹುದಾಗಿದ್ದು ಕೇವಲ ಅದಕ್ಕಾಗಿ ಆತನನ್ನು ತಮ್ಮ ವಶಕ್ಕೆ ತೆಗೆದುಕೊಂಡು ತಾಲ್ಲೂಕಾ ಲಾಕಪ್‌ನಲ್ಲಿ ಇರಿಸಲಾಗಿತ್ತು ಎಂದು ಅವರು ಹೇಳಿದ್ದಾರೆ. ಜಿಲ್ಲಾ ಮ್ಯಾಜಿಸ್ಟ್ರೇಟರು ಲಾಕಪ್‌ನಲ್ಲಿ ಕುಡಿಯುವ ನೀರಿನ ವ್ಯವಸ್ಥೆ ಇರಲಿಲ್ಲ ಎಂಬುದನ್ನು ನಿರಾಕರಿಸಿದ್ದಾರೆ. ಆದರೆ ಊಟದ ವ್ಯವಸ್ಥೆಯನ್ನು ಮರುಪಾವತಿಸಲು ತಪ್ಪಿಸಿಕೊಂಡವರ ಕುಟುಂಬದ ಸದಸ್ಯರು ಮಾಡಬೇಕಾಗಿತ್ತು. ಅವರು ಒಂದು ವೇಳೆ ಅದನ್ನು ಮಾಡದಿದ್ದಲ್ಲಿ ಭೂ ಅಭಿವೃದ್ಧಿ ಬ್ಯಾಂಕಿನ ಕಡೆಯಿಂದ ಒಂದು ಊಟಕ್ಕೆ 50

ಪೈಸೆಯ ದರದಲ್ಲಿ ಊಟದ ವ್ಯವಸ್ಥೆ ಮಾಡಲಾಗಿದ್ದು, ಆ ಮೊತ್ತವನ್ನು ಮರು ಪಾವತಿಸಲು ತಪ್ಪಿಸಿಕೊಂಡವರ ಸಾಲದ ಬಾಕಿ ಮೊತ್ತಕ್ಕೆ ಸೇರಿಸುವ ರೀತಿಯಲ್ಲಿ ಆ ವ್ಯವಸ್ಥೆ ಇದೆ. 8' x 16'ರ ಅಳತೆಯ ಲಾಕಪ್‌ನಲ್ಲಿ ಮರುಪಾವತಿಸದೆ ತಪ್ಪಿಸಿಕೊಂಡಿರುವ ಇಂತಹುದೇ ಇತರ 11 ಮಂದಿಯನ್ನು ಇರಿಸಲಾಗಿತ್ತು ಎಂದು ಹೇಳಲಾಗಿರುವುದನ್ನು ಅವರು ನಿರಾಕರಿಸಿಲ್ಲ. ಗತಿಸಿದವನ ಕುಟುಂಬಕ್ಕೆ ರೂ.5000/- ಪರಿಹಾರ ಧನ ನೀಡಲಾಗಿದೆ ಎಂದು ಹೇಳಲಾಗಿದ್ದು, ಯಾವುದೇ ರೀತಿಯಲ್ಲಾಗಲೀ ಮಾನವ ಹಕ್ಕುಗಳ ಉಲ್ಲಂಘನೆಯಾಗಿರುವುದನ್ನು ನಿರಾಕರಿಸಲಾಗಿದೆ.

ತನಿಖೆ ನಡೆಸಿ ವರದಿ ಸಲ್ಲಿಸುವಂತೆ ಮಹಾ ನಿರ್ದೇಶಕರನ್ನು (ತನಿಖೆ) ಕೋರಲಾಗಿದೆ. ಸಹಾಯಕ ನಿರ್ದೇಶಕರು ಸಿದ್ಧಪಡಿಸಿ ಸಲ್ಲಿಸಿದ ವರದಿಯನ್ನು ಪರಿಶೀಲಿಸಿದ ಮಹಾ ನಿರ್ದೇಶಕರು (1) ಒಂದು ಲಕ್ಷ ರೂಪಾಯಿಗಳನ್ನು "ತತ್‌ಕ್ಷಣದ ತಾತ್ಕಾಲಿಕ ಪರಿಹಾರ"ವನ್ನಾಗಿ ನೀಡಲು ಶಿಫಾರಸು ಮಾಡಿದ್ದಾರೆ. ಹಾಗೂ ಸಾಲ ಮರುಪಾವತಿಸದೆ ಉಳಿದವರನ್ನು ಬಂಧನದಲ್ಲಿ ಇರಿಸಲಾಗಿದ್ದ ರೀತಿಯನ್ನು ಹೀಗಳೆದಿದ್ದಾರೆ.

ಈ ಪ್ರಕರಣಕ್ಕೆ ಸಂಬಂಧಿಸಿದ ವಾಸ್ತವಿಕ ಸಂಗತಿಗಳು ಚಕಿತಗೊಳಿಸುವಂತಿದೆ ಮತ್ತು ಸಂಬಂಧಿಸಿದ ಎಲ್ಲ ಅಧಿಕಾರಿಗಳ ನಿರ್ದಯತೆ ಹಾಗೂ ಸರ್ವೋಚ್ಚ ನ್ಯಾಯಾಲಯ ಇಂತಹ ಪರಿಸ್ಥಿತಿಗಳಲ್ಲಿ ಅನುಸರಿಸುವಂತೆ ನಿಗದಿ ಪಡಿಸಿದ್ದ ಕಾನೂನು ಕ್ರಮಗಳ ಕುರಿತು ತಿಳುವಳಿಕೆಯಿಲ್ಲದವರಾಗಿರುವುದನ್ನು ಇದು ತೆರೆದು ತೋರಿಸಿದೆ. ಜೋಲ್ಲಿ ವರ್ಗೀಸ್ ಮತ್ತು ದಿ ಬ್ಯಾಂಕ್ ಆಫ್ ಕೊಚಿನ್ ನಡುವಣ ಪ್ರಕರಣದ ತೀರ್ಪಿನಲ್ಲಿ (ಆಲ್ ಇಂಡಿಯಾ ರಿಪೋರ್ಟ್ 1980 ಎಸ್. ಸಿ. 470) ಸರ್ವೋಚ್ಚ ನ್ಯಾಯಾಲಯವು ಕರಾರಿನ ಬಾಧ್ಯತೆಯ ಪ್ರಕಾರವಾಗಿ ಮರುಪಾವತಿಸಲು ತಪ್ಪಿಸಿಕೊಂಡವರೊಂದಿಗೆ ವ್ಯವಹರಿಸಬೇಕಾದ ಬಗೆಯನ್ನು ಮುಂದಿರಿಸುತ್ತದೆ. ಜಸ್ಟಿಸ್ ಕೃಷ್ಣ ಅಯ್ಯರ್ ಅವರು ಐಸಿಸಿಪಿಆರ್‌ನ ಪರಿಚ್ಛೇದ 11ರ ಸಂದರ್ಭದಲ್ಲಿ ನಾಗರಿಕ ಕ್ರಮಗಳ ಸಂಹಿತೆಯ ಪರಿಚ್ಛೇದ 51 ಮತ್ತು ಆದೇಶ 21 ನಿಯಮ 37ರಲ್ಲಿ ನೀಡಲಾಗಿರುವ ಅವಕಾಶಗಳನ್ನು ಗ್ರಹಿಸಿರುವಂತೆ:

"ಸಾಕಷ್ಟು ಆದಾಯವಿದ್ದೂ ಮನಃಪೂರ್ವಕವಾಗಿಯೇ ಕಂದಾಯ ಪಾವತಿಸಲು ತಪ್ಪಿದ್ದಲ್ಲಿ ಮತ್ತು ಕ್ಯಾನ್ಸರ್ ಅಥವಾ ಇತರ ತೀವ್ರ ಕಾಯಿಲೆಗಳ ವೈದ್ಯಕೀಯ ತೀವ್ರ ಅಗತ್ಯದ ವೆಚ್ಚಗಳಂತಹ ಇನ್ನಾವುದೇ ವೆಚ್ಚವನ್ನು ಭರಿಸುವಂತಹ ತೀವ್ರ ಒತ್ತಡವಿರದಿದ್ದಲ್ಲಿ , ಈ ಕಾರಣಗಳಿಗಾಗಿ ಪಾವತಿಸದಿರುವುದಕ್ಕೆ ಸೂಕ್ತ ಪುರಾವೆಗಳಿದ್ದಲ್ಲಿ - ಇಂತಹ ಸಂದರ್ಭಗಳನ್ನು ಹೊರತು ಪಡಿಸಿ ವ್ಯಕ್ತಿಯೊಬ್ಬನನ್ನು ಸೆರೆಮನೆಗೆ ತಳ್ಳುವುದರ ಮೂಲಕ ಸಾಲ ವಸೂಲಾತಿ ಮಾಡುವ ಕ್ರಮವು ಪರಿಚ್ಛೇದ 21ರಲ್ಲಿ ನೀಡಲಾಗಿರುವ ಅವಕಾಶದ ದಾರುಣ ಉಲ್ಲಂಘನೆಯಾಗಿರುತ್ತದೆ".

ಆ ನ್ಯಾಯ ತೀರ್ಪು ಮುಂದುವರೆದು ಈ ಕೆಳಗಿನಂತೆ ಹೇಳುತ್ತದೆ:

"ಕೇವಲ ತೆರಿಗೆ ಪಾವತಿಸದಂತೆ ತಪ್ಪಿಸಿಕೊಳ್ಳುವುದು ಮಾತ್ರ ಸಾಲದು, ಪಾವತಿಸುವುದರ ಬಗೆಗಿನ ಉಪೇಕ್ಷೆಯನ್ನು ಮೀರಿದ ಅವಿಧೇಯತೆಗೆ ಸಂಬಂಧಿಸಿದ ಅಂಶ ಅದರಲ್ಲಿ ಇರಬೇಕು. ಹಿಂದಿನಿಂದನೂ ನಡೆದು ಬಂದ ಉದ್ದೇಶಪೂರ್ವಕವಾದ ಪ್ರತಿಭಟನೆಯ ಪ್ರವೃತ್ತಿ ಅಥವಾ

ಪಾವತಿಸಲು ತಪ್ಪಿರುವುದು ಮಾತ್ರವೇ ಅಲ್ಲದೆ, ಸಾಕಷ್ಟು ಆದಾಯವಿದ್ದೂ, ಶಾಸನಬದ್ಧವಾದ ತನ್ನ ಬಾಧ್ಯತೆಯನ್ನು ಅಪ್ರಾಮಾಣಿಕವಾಗಿ ತನ್ನದಲ್ಲವೆನ್ನುವಂತಹ, ಬೇಕೆಂತಲೇ ನಿರಾಕರಿಸುವ ಒಂದು

ನಡವಳಿಕೆ ಸಾಬೀತಾಗಬೇಕು ಈ ಅವಕಾಶ ಒತ್ತಿ ಹೇಳುತ್ತದೆ. ಇಲ್ಲಿ ಸಾಲಗಾರನ ಇತರ ತೀವ್ರ ಅವಶ್ಯಕತೆಗಳು ಹಾಗೂ ಪ್ರಯಾಸಕರವಾದ ಸನ್ನಿವೇಶಗಳು ಪ್ರಮುಖ ಪಾತ್ರ ವಹಿಸುತ್ತವೆ."

ಆದ್ದರಿಂದ ಕರಾರಿನನ್ವಯ ಇರುವ ಸಾಲದ ಹೊರೆಯನ್ನು ಪಾವತಿಸಲು ತಪ್ಪುವುದರ ಬಗೆಗೆ ಸರಿಯಾದ ವಿಚಾರಣೆ ನಡೆದು ಒಂದು ತೀರ್ಮಾನಕ್ಕೆ ಬರದೆ ಅಂದರೆ ಸಾಲ ಮರುಪಾವತಿಯಲ್ಲಿ ತನ್ನ ಬಾಧ್ಯತೆಯನ್ನು ನಿರಾಕರಿಸುವಂತಹ ಅವಿಧೇಯತೆ ಕಂಡು ಬರದ ಹೊರತು ಕೇವಲ ಸಾಲ ಮರುಪಾವತಿಸದಿರುವುದಕ್ಕಾಗಿ ಮಾತ್ರವೇ ಸಾಲ ಮರುಪಾವತಿಸಲು ತಪ್ಪಿದವರನ್ನು ಬಂಧಿಸಲು ಬರುವುದು ಸ್ಪಷ್ಟವಾಗಿದೆ. ಪ್ರಸ್ತುತ ಪ್ರಕರಣದಲ್ಲಿ ವಾಸ್ತವ ಸಮಸ್ಯೆಯನ್ನು ಪರಿಶೀಲಿಸಿ ಇಂತಹ ಒಂದು ತೀರ್ಮಾನಕ್ಕೆ ಬರುವ ಪ್ರಯತ್ನವನ್ನು ಮಾಡಲಾಗಿಲ್ಲ. ಇಂತಹ ಒಂದು ವಿಚಾರಣೆಯನ್ನು ತಹಸೀಲ್ದಾರರಾಗಲೀ, ಇನ್ನಿತರ ಅಧಿಕಾರಿಗಳಾಗಲೀ ಮಾಡಿಲ್ಲ. ತನ್ನ ಬಾಧ್ಯತೆಯನ್ನು ತನ್ನದಲ್ಲವೆನ್ನುವ ಅಪ್ರಾಮಾಣೀಕತೆಯು ಈ ಸಾಲ ಮರು ಪಾವತಿಸಲು ತಪ್ಪಿರುವುದರಲ್ಲಿ ಕಂಡು ಬಂದಿಲ್ಲ ಎನ್ನುವುದು ನ್ಯಾಯಾಧಿಕಾರಕ್ಕೆ ಸಂಬಂಧಿಸಿದ ವಾಸ್ತವವಾಗಿದ್ದು ಅದಿಲ್ಲದೆ ಅಂತಹವರನ್ನು ಬಂಧಿಸಲು ಅವಕಾಶವಿಲ್ಲ. ಈ ಕಾರಣಕ್ಕಾಗಿಯೇ ಪಾರ್ಮೈನ (ಗತಿಸಿದ) ಬಂಧನವೇ ಕಾನೂನು ಬಾಹಿರವಾದುದಾಗಿದ್ದು, ಬಂಧನದಲ್ಲಿದ್ದಾಗ ಸಂಭವಿಸಿದ ಆತನ ದುರಂತ ಸಾವು ಬಂಧಿಸಿದ ಅಧಿಕಾರಿಗಳ ಕ್ರೂರತೆಗೆ ಸಾಕ್ಷಿಯಾಗಿದೆ.

ಬ್ಯಾಂಕ್ ಸಾಲದ ಮರುಪಾವತಿಗಾಗಿ ಉಳಿದ ಬಾಕಿಯನ್ನು ವಸೂಲಿ ಮಾಡಲು ತಮ್ಮ ಅಧಿಕೃತ ಸಾಮರ್ಥ್ಯದಲ್ಲಿ ತಹಸೀಲ್ದಾರ್ ಮತ್ತು ಇತರೆ ಅಧಿಕಾರಿಗಳು ಕೈಗೊಂಡ ಕ್ರಮವನ್ನು ಉತ್ತರ ಪ್ರದೇಶ ಸರ್ಕಾರದ ಬಾಧ್ಯತೆಯನ್ನು ಒಪ್ಪಿಕೊಂಡ ವಾಸ್ತವಾಂಶಗಳ ಮೇರೆಗೆ ಮಾತ್ರ ಇಲ್ಲಗೊಳಿಸಲಿಕ್ಕಾಗುವುದಿಲ್ಲ. ಗತಿಸಿದ ಪಾರ್ಮೈನ ಕುಟುಂಬದ ಸದಸ್ಯರಿಗೆ ನೀಡಲಾಗಿರುವ ರೂ.5000/- ಪರಿಹಾರ ಕೇವಲ ಅತ್ಯಲ್ಪ ಮೊತ್ತವಾಗಿದೆ. ಗತಿಸಿದವನ ಕುಟುಂಬದವರಿಗೆ ತಕ್ಕಷ್ಟು ನಷ್ಟ ಭರ್ತಿ ಮಾಡದ ರಾಜ್ಯ ಸರ್ಕಾರದ ಕ್ರಮವು ಕ್ಷಮೆಗೆ ಅರ್ಹವಾದುದಲ್ಲ. ಆದ್ದರಿಂದ ಆಯೋಗವು ಗತಿಸಿದ ಪರ್ಮಾಯಿಯು ಉಳಿಸಿ ಹೋದ ಕುಟುಂಬದವರಿಗೆ ಉತ್ತರ ಪ್ರದೇಶ ಸರ್ಕಾರ ಒಂದು ಲಕ್ಷ ರೂಪಾಯಿಗಳ " ತತ್‌ಕ್ಷಣದ ತಾತ್ಕಾಲಿಕ ಪರಿಹಾರ"ವನ್ನು ನೀಡುವಂತೆ ಆದೇಶಿಸಿದೆ. ಇಂತಹ ಎಲ್ಲ ಪ್ರಕರಣಗಳಿಗೆ ಸಂಬಂಧಿಸಿದಂತೆ ಸರ್ವೋಚ್ಛ ನ್ಯಾಯಾಲಯ ಕೈಗೊಂಡ ತೀರ್ಮಾನದ ಮೂಲಕ ಮುಂದಿಟ್ಟ ಕಾನೂನನ್ನು ರಾಜ್ಯ ಕಂದಾಯ ಇಲಾಖೆಯ ಅಧಿಕಾರಿಗಳು ತಪ್ಪದೆ ಪಾಲಿಸುವಂತೆ ಸೂಚನೆ ಕೊಡಬೇಕೆಂದು ಸರ್ಕಾರಕ್ಕೆ ಶಿಫಾರಸು ಮಾಡಿದೆ. ಅನುಸರಣೆಯ ವರದಿಯನ್ನು ಆರು ವಾರಗಳೊಳಗಾಗಿ ಸಲ್ಲಿಸತಕ್ಕದ್ದು.

ಮೇಲೆ ತಿಳಿಸಲಾಗಿರುವ ನಿರ್ದೇಶನದ ಪ್ರಕಾರ ಈ ಪ್ರಕರಣ

ಸಹಿ/-

(ನ್ಯಾಯಮೂರ್ತಿ ಜೆ. ಎಸ್. ವರ್ಮಾ)

ಅಧ್ಯಕ್ಷರು

ಅಧ್ಯಾಯ IV

# ಪೊಲೀಸ್ ಮತ್ತು ಸಾರ್ವಜನಿಕ ಸಂಬಂಧವನ್ನು ಉತ್ತಮಗೊಳಿಸುವುದಕ್ಕಾಗಿ ಇರುವ ಕ್ರಮಗಳು

ಮಹಾ ನಿರ್ದೇಶಕರು (ತನಿಖೆ) ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ

2ನೇ ಆಗಸ್ಟ್, 1999

ರಾಜ್ಯ ಪೊಲೀಸ್ ಮುಖ್ಯ ಕಛೇರಿಗಳಲ್ಲಿರುವ ಮಾನವ ಹಕ್ಕುಗಳ ಸೆಲ್‌ಗಳು ವಹಿಸಿ ಕೊಂಡು ನಿರ್ವಹಣೆ ಮಾಡಬೇಕಾದ ಪಾತ್ರ ಹಾಗೂ ಕರ್ತವ್ಯಗಳನ್ನು ಕುರಿತಂತೆ 1999ರ ಜೂನ್ 1ರಂದು ಎಲ್ಲ ಪೊಲೀಸ್ ಮಹಾ ನಿರ್ದೇಶಕರುಗಳಿಗೆ, ಪೊಲೀಸ್ ಕಮಿಷನರ್‌ಗಳು ಹಾಗೂ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರುಗಳಿಗೆ ಹಾಗೂ ಮಾನವ ಹಕ್ಕುಗಳ ಇನ್ಸ್‌ಪೆಕ್ಟರ್ ಜನರಲ್‌ಗಳಿಗೆ ಪತ್ರ ಬರೆದು, ಸಲಹೆಗಳನ್ನು ಆಹ್ವಾನಿಸಲಾಗಿದೆ. ಈ ಅಧಿಕಾರಿಗಳಿಂದ ಈ ಪತ್ರಕ್ಕೆ ಪಡೆದ ಹಾಗೂ ಅವರೊಂದಿಗೆ ನಡೆದ ವಿಚಾರ ವಿನಿಮಯಗಳ ಮೂಲಕ ಪಡೆದ ಪ್ರತಿಕ್ರಿಯೆಗಳ ಆಧಾರದ ಮೇಲೆ ಈ ಕೆಳಗಿನ ಮಾರ್ಗಸೂಚಿಯನ್ನು ಸಿದ್ಧಪಡಿಸಿ ಪೊಲೀಸ್ ಮುಖ್ಯ ಕಛೇರಿಗಳಲ್ಲಿನ ಮಾನವ ಹಕ್ಕುಗಳ ಸೆಲ್‌ಗಳ ಪರಿಣಾಮಕಾರಿ ಕಾರ್ಯ ನಿರ್ವಹಣೆಗಾಗಿ ಅದನ್ನು ಸುತ್ತೋಲೆಯಾಗಿ ಕಳುಹಿಸಲಾಗಿದೆ:

1) ಮಾನವ ಹಕ್ಕುಗಳ ಸೆಲ್ ಎನ್‌ಎಚ್‌ಆರ್‌ಸಿ ಮತ್ತು ರಾಜ್ಯ ಪೊಲೀಸ್ ವ್ಯವಸ್ಥೆಗಳ ನಡುವೆ ಪ್ರಮುಖ ಕೊಂಡಿಯಾಗಿ ಕಾರ್ಯ ನಿರ್ವಹಿಸುತ್ತಿದೆ.

2) ಆಯೋಗದಿಂದ ಮಾನವ ಹಕ್ಕುಗಳ ಸೆಲ್‌ಗೆ ಕಳುಹಿಸಲ್ಪಡುವ ಎಲ್ಲ ಪ್ರಮುಖ ಪ್ರಕರಣಗಳು/ದೂರುಗಳು ಸೂಕ್ತ ಮಟ್ಟದ ಅಧಿಕಾರಿಗಳಿಂದ ತನಿಖೆ ಮಾಡಲ್ಪಡಬೇಕು. ಆ ನಂತರ, ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಆಯೋಗ ಮಾಡಿರುವ ಶಿಫಾರಸ್ಸುಗಳ ಪ್ರಕಾರ ಕೈಗೊಳ್ಳಬಹುದಾದ ಸೂಕ್ತ ಕ್ರಮಗಳನ್ನು ಅನುಸರಿಸುವುದರ ಪ್ರಕಾರ ಪ್ರಾರಂಭಗೊಳ್ಳಬೇಕು. ಹಾಗೂ ಪರಿಹಾರ ಕ್ರಮಗಳನ್ನು ಅಗತ್ಯವಿರುವೆಡೆಗಳಲ್ಲಿ ಕೈಗೊಳ್ಳಬೇಕು. ಆದರೆ, ಬಾಹ್ಯ ಹಸ್ತಕ್ಷೇಪದಿಂದಾಗಿ ನಿಷ್ಪಕ್ಷಪಾತವಾದ ತನಿಖೆ ಸಾಧ್ಯವಿಲ್ಲದಿರುವಂತಹ ಪ್ರಕರಣಗಳಲ್ಲಿ ರಾಜ್ಯ ಸಿಐಡಿ ಅಥವಾ ಸಿಬಿಐನವರಿಂದ ತನಿಖೆ ನಡೆಸಲು ಶಿಫಾರಸ್ಸು ಮಾಡಬಹುದು.

3) ಪೊಲೀಸ್ ಉದ್ಯೋಗಿಗಳಿಂದ ಮಾನವ ಹಕ್ಕುಗಳ ಉಲ್ಲಂಘನೆಯಾಗಿದೆ ಎಂಬುದನ್ನು ವಾರ್ತಾ ಪತ್ರಿಕೆಗಳು, ಪ್ರಕಟಣೆಗಳು/ಅಥವಾ ವಿವಿಧ ಅಧಿಕಾರಿಗಳಿಗೆ ಬರುವ ದೂರುಗಳ ಮೂಲಕ ಬೆಳಕಿಗೆ ಬರುವುದನ್ನು ಗಮನವಿಟ್ಟು ನೋಡುತ್ತಿರಬೇಕು.

4) ಎಲ್ಲ ತನಿಖೆಗಳು/ಪೊಲೀಸ್ ದೌರ್ಜನ್ಯಗಳಿಗೆ ಸಂಬಂಧಿಸಿದ ಪ್ರಕರಣಗಳು/ಬೆದರಿಕೆ/ಅಧಿಕಾರದ ದುರ್ಬಳಕೆ ಮುಂತಾದುವುಗಳಿಗೆ ಸಂಬಂಧಿಸಿದಂತೆ ವಾಸ್ತವಿಕ ಸಂಗತಿಗಳನ್ನು ತಿಳಿಯಲು ಮತ್ತು ಅದನ್ನು ಪರಿಶೀಲಿಸಲು ಆಯೋಗಲು ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳಿಗೆ ಕಳುಹಿಸುವ

ಪ್ರಕರಣಗಳನ್ನು ಈ ಸೆಲ್ ಮೇಲ್ವಿಚಾರಣೆ ಮಾಡಬಹುದು. ಹೀಗೆ ಕಳುಹಿಸಲ್ಪಟ್ಟವುಗಳೆಲ್ಲದರ ಪ್ರತಿಯೊಂದನ್ನು, ಪೊಲೀಸ್ ವರಿಷ್ಠಾಧಿಕಾರಿಗಳು ಅದಕ್ಕೆ ಸಮಯಕ್ಕೆ ಸರಿಯಾಗಿ ಪ್ರತಿಕ್ರಿಯಿಸಲು ಸಾಧ್ಯವಾಗುವಂತೆ ಮೇಲ್ವಿಚಾರಣೆ ಮಾಡಲು ಸೆಲ್‌ಗೆ ಕೂಡ ಕಳುಹಿಸಲಾಗುತ್ತದೆ. ಆಯೋಗವು ನಿರ್ದಿಷ್ಟ ಆದೇಶಗಳನ್ನು ಪಾಸು ಮಾಡಿದಾಗಲೆಲ್ಲ ಅದನ್ನು ಅಂಗೀಕರಿಸಿ ಅನುಸರಣೆಯ ಕ್ರಮವನ್ನು ಕೈಗೊಳ್ಳಬೇಕು.

5) ಪೋಲೀಸರಿಂದ ಮಾನವ ಹಕ್ಕುಗಳ ಉಲ್ಲಂಘನೆಯನ್ನು ಕಡಿಮೆಗೊಳಿಸುವುದಕ್ಕಾಗಿ ಸಂಬಂಧಪಟ್ಟ ಮನವಿಗಳು/ಫಿರ್ಯಾದುಗಳಿಗೆ ಸಂಬಂಧಿಸಿದಂತೆ ಮಾನವ ಹಕ್ಕುಗಳ ಸೆಲ್ ನಿರಂತರವಾಗಿ ಸೂಪರಿಂಟೆಂಡೆಂಟ್ ಆಫ್ ಪೋಲೀಸರೊಂದಿಗೆ ವಿಚಾರ ವಿನಿಮಯ ನಡೆಸಿ ಸೂಚನೆ/ಮಾರ್ಗಸೂಚಿಗಳನ್ನು ಕಳುಹಿಸುತ್ತಿರಬೇಕು.

6) ಕಾನೂನು ಬಾಹಿರವಾದ ಬಂಧನ ಹಾಗೂ ಅಧಿಕಾರದ ದುರುಪಯೋಗದ ಪ್ರಕರಣಗಳನ್ನು ಪರೀಕ್ಷಿಸಲು ಪೊಲೀಸ್ ಠಾಣೆಗಳ ಹಠಾತ್ ಭೇಟಿ ಮಾಡುವುದು.

7) ಪೊಲೀಸ್ ಅಧಿಕಾರಿಗಳ ಸಂಪರ್ಕದಲ್ಲಿ ಬರುವ ನಾಗರಿಕರ ಮಾನವ ಹಕ್ಕುಗಳ ಉಲ್ಲಂಘನೆಯಾಗುವುದನ್ನು ತಡೆಯಲು ಹಾಗೂ ಮಾನವ ಹಕ್ಕುಗಳನ್ನು ರಕ್ಷಿಸಿ ಗೌರವಿಸಲು ಇತರ ಅಗತ್ಯ ಕ್ರಮಗಳನ್ನು ಕೈಗೊಳ್ಳಬೇಕು.

8) ರಾಜ್ಯದ ಎಲ್ಲ ಪೊಲೀಸ್ ಠಾಣೆಗಳಲ್ಲಿ ಸರ್ವೋಚ್ಚ ನ್ಯಾಯಾಲಯ ಡಿ. ಕೆ. ಬಸು ಹಾಗೂ ಪಶ್ಚಿಮ ಬಂಗಾಳ ರಾಜ್ಯ ಸರ್ಕಾರದ ನಡುವಣ ಪ್ರಕರಣ 1986ರ ಡಬ್ಲ್ಯೂಪಿ ಸಂ.539ರಲ್ಲಿ ನೀಡಿರುವ ಮಾರ್ಗಸೂಚಿಯನ್ನು ಎಲ್ಲರಿಗೆ ಕಾಣಿಸುವಂತೆ ಇರಿಸಬೇಕು. ಇವುಗಳು ಬಂಧಿತರ ಹಕ್ಕುಗಳನ್ನು ಮತ್ತು ಘನತೆಯನ್ನು ರಕ್ಷಿಸುವುದಕ್ಕೆ ಮತ್ತು ಅದೇ ಪ್ರಕಾರವಾಗಿ ಪೋಲೀಸರ ಕರ್ತವ್ಯ ಪಾಲನೆಗೆ ಸಂಬಂಧಿಸಿದಂತೆ

ಇರುವ ಸಂವಿಧಾನಬದ್ಧವಾದ ಮತ್ತು ಶಾಸನಬದ್ಧವಾದ ರಕ್ಷಣೆ ಹಾಗೂ ಅದಕ್ಕೆ ಸಂಬಂಧಿಸಿದಂತೆ ನ್ಯಾಯಾಲಯಗಳು ಆಯಾ ಸಂದರ್ಭಗಳಲ್ಲಿ ನೀಡಿರುವ

ನಿರ್ದೇಶನಗಳಿಗೆ ಇರುವ ಸೇರ್ಪಡೆಯಾಗಿರುತ್ತದೆ. ಮಹಿಳೆಯರು, ಮಕ್ಕಳು ಹಾಗೂ ಸಮಾಜದಲ್ಲಿ ಸುಲಭವಾಗಿ ಘಾಸಿಗೆ ತುತ್ತಾಗುವಂತಹ ವಿಭಾಗಗಳು ಪೋಲೀಸರಿಂದ ದೌರ್ಜನ್ಯಕ್ಕೊಳಗಾಗದಂತೆ ಅನಿವಾರ್ಯವಲ್ಲದ ಸಂದರ್ಭಗಳಲ್ಲಿ ಅವರನ್ನು ಪೊಲೀಸ್ ಠಾಣೆಗೆ ಕರೆಸಿಕೊಳ್ಳಕೂಡದು.

9) ಮಾನವ ಹಕ್ಕುಗಳ ವ್ಯಾಪ್ತಿಯಲ್ಲಿ ಬರುವ ಸಾಕಷ್ಟು ಅಂಶಗಳು ರಾಜ್ಯ ಪೊಲೀಸ್ ಅಕಾಡೆಮಿ ಹಾಗೂ ತರಬೇತಿ ಕೇಂದ್ರಗಳಲ್ಲಿ ತರಬೇತಿ ಪಡೆಯುತ್ತಿರುವ ಎಲ್ಲ ಶ್ರೇಣಿಗಳವರ ಒಳ ಸೇವಾ ಪಠ್ಯ ವಿಷಯದಲ್ಲಿ ಸೇರ್ಪಡೆಯಾಗುವಂತೆ ಅವುಗಳೊಂದಿಗೆ ಸಮನ್ವಯತೆ ಸಾಧಿಸಬೇಕು. ಇಂತಹ ತರಬೇತಿ ವಿಧಾನಗಳು ಈ ಕೆಳಗೆ ಸೂಚಿಸಲಾಗಿರುವ ವಿಚಾರಗಳಲ್ಲಿ ಶಿಕ್ಷಣ ನೀಡುವ ಹಾಗೂ ಸೂಕ್ಷ್ಮತೆಯನ್ನು ಉಂಟುಮಾಡುವ ಗುರಿಯನ್ನು ಹೊಂದಿರತಕ್ಕದ್ದು:

ಎ) ನಾಕರಿಕ ಹಕ್ಕುಗಳಿಗೆ ಸಂಬಂಧಿಸಿದಂತೆ ಸಂವಿಧಾನದತ್ತ ಅವಕಾಶಗಳು.

ಬಿ) ವಶಕ್ಕೆ ತೆಗೆದುಕೊಳ್ಳುವುದು, ಪ್ರಶ್ನೆಗಳ ಮೂಲಕ ಪರೀಕ್ಷೆ ಮಾಡುವುದು, ತಲಾಷೆ ಹಾಗೂ ಮುಟ್ಟುಗೋಲು ಈ ವಿಚಾರಗಳಿಗೆ ಸಂಬಂಧಿಸಿದಂತೆ ಇರುವ ಕಾನೂನುಗಳಲ್ಲಿ ನೀಡಲಾಗಿರುವ ಪ್ರಮುಖ ಅವಕಾಶಗಳಲ್ಲಿ ಸ್ಪಷ್ಟಪಡಿಸಲಾಗಿರುವ 'ಮಾಡಬಹುದಾದ' ಹಾಗೂ 'ಮಾಡಬಾರದ' ಅಂಶಗಳು

ಸಿ) ಮಾನವ ಹಕ್ಕುಗಳ ವಿಚಾರದಲ್ಲಿ ಸರ್ವೋಚ್ಚ ನ್ಯಾಯಾಲಯ ನೀಡಿರುವ ಪ್ರಮುಖ ತೀರ್ಪುಗಳು; ಹಾಗೂ

ಡಿ) ತಮ್ಮ ಕರ್ತವ್ಯ ಪಾಲನೆ ಹಾಗೂ ಜವಾಬ್ದಾರಿ ನಿರ್ವಹಣೆಯ ಸಂದರ್ಭದಲ್ಲಿ ಮಾನವ ಹಕ್ಕುಗಳ ಮಾರ್ಗಸೂಚಿಗಳು/ಸೂಚನೆಗಳು/ಕಾನೂನುಗಳನ್ನು ಗಮನಿಸದೆ ಬಿಟ್ಟುಬಿಟ್ಟಿರುವುದರ ಪರಿಣಾಮಗಳು

10) ಪ್ರಮುಖ ವ್ಯಕ್ತಿಗಳು, ನ್ಯಾಯವಾದಿಗಳು ಹಾಗೂ ಸರ್ಕಾರೇತರ ಸಂಸ್ಥೆಗಳವರನ್ನು ಆಹ್ವಾನಿಸಿ ಯುಕ್ತ ಅವಧಿಯಲ್ಲಿ ಎಲ್ಲ ತರಬೇತಿ ಸಂಸ್ಥೆಗಳಲ್ಲಿ ವಿಚಾರ ವಿನಿಮಯದ ಅಧಿವೇಶನಗಳು/ ಕ್ಯಾಪ್ಸೂಲ್ ಕೋರ್ಸ್‌ಗಳನ್ನು ಸಂಯೋಜಿಸಬೇಕು.

11) ಮಾನವ ಹಕ್ಕುಗಳ ವಿಚಾರದಲ್ಲಿ ಕಡ್ಡಾಯವಾಗಿ ಅನುಸರಿಸಬೇಕಾದ ಕ್ರಮಗಳ ಕುರಿತಂತೆ ಪೊಲೀಸ್ ಮುಖ್ಯ ಕಛೇರಿಯು ಕಾಲಕಾಲಕ್ಕೆ ಹೊರಡಿಸಿದ ಸುತ್ತೋಲೆಗಳು ಹಾಗೂ ನಿರ್ದೇಶನಗಳನ್ನು ಕ್ರೋಢೀಕರಿಸಿ ಅವುಗಳನ್ನೆಲ್ಲ ಪುನರಾವಲೋಕಿಸಲು ಸಾಧ್ಯವಾಗುವಂತೆ ಮತ್ತೆ ಎಲ್ಲ ಪೊಲೀಸ್ ಠಾಣೆಗಳಿಗೆ ಕಳುಹಿಸಿ ಕೊಡಬೇಕು.

12) ರಾಜ್ಯದಲ್ಲಿ ಸಾಮಾಜಿಕವಾಗಿ ಮಾನವ ಹಕ್ಕುಗಳ ಉಲ್ಲಂಘನೆಯಾಗುವ ನಿರ್ದಿಷ್ಟ ಕ್ಷೇತ್ರಗಳನ್ನು ಗುರುತಿಸಿ ಅವುಗಳ ತಡೆ ಹಾಗೂ ಪುನರ್ವಸತಿ ಕಾರ್ಯಕ್ರಮಗಳನ್ನು ಸಂಬಂಧಪಟ್ಟ ಇಲಾಖೆಗಳೊಂದಿಗೆ ಕೂಡಿ ಯೋಜಿಸಬೇಕು. (ಉದಾಹರಣೆಗೆ ಮಕ್ಕಳ ಹಕ್ಕುಗಳ ಕ್ಷೇತ್ರದಲ್ಲಿ - ಮಕ್ಕಳ ಮೇಲಾಗುವ ಲೈಂಗಿಕ ಕಿರುಕುಳ, ಬಾಲ ಕಾರ್ಮಿಕತೆ, ಲಿಂಗ ಅಸಮಾನತೆ, ಮಕ್ಕಳಿಗೆ ಅನ್ಯಾಯ, ಮಾನಸಿಕ ರೋಗಿಯಾಗಿರುವ ಅಪರಾಧಿಯಲ್ಲದ ವ್ಯಕ್ತಿಯನ್ನು ಕಾರಾಗೃಹದಲ್ಲಿರಿಸಿರುವುದು, ನಿರ್ದಿಷ್ಟ ಕ್ಷೇತ್ರಗಳಲ್ಲಿ ಅವಕಾಶ ವಂಚಿತರ ಮೇಲೆ, ಹಿಂದುಳಿದವರ/ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳವರ ಮೇಲೆ ನಡೆಯುವ ತಾರತಮ್ಯತೆ ಇತ್ಯಾದಿ.)

13) ಮಾನವ ಹಕ್ಕುಗಳಿಗೆ ಸಂಬಂಧಿಸಿದಂತೆ ವಿವಿಧ ನಗರಗಳಲ್ಲಿ ರಾಜ್ಯ ಮಾನವ ಹಕ್ಕುಗಳ ಆಯೋಗಗಳು (ಸ್ಥಾಪಿತವಾಗಿರುವ ಕಡೆಗಳಲ್ಲಿ), ಸ್ಥಳೀಯ ವಿಶ್ವವಿದ್ಯಾನಿಲಯ ಅಥವಾ ಕಾಲೇಜುಗಳು, ರೋಟರಿ/ಲಯನ್ಸ್ ಕ್ಲಬ್‌ಗಳಂತಹ ಲೋಕ ಹಿತಕಾರಕ ಸಂಸ್ಥೆಗಳೊಂದಿಗೆ ಕೂಡಿ ಮಾನವ ಹಕ್ಕುಗಳಿಗೆ ಸಂಬಂಧಿಸಿದಂತೆ ಏಕದಿನ ವಿಚಾರ ಸಂಕಿರಣಗಳು/ಕಾರ್ಯಾಗಾರಗಳನ್ನು ಏರ್ಪಡಿಸುವುದು.

14) ಬಂಧನದಲ್ಲಿರುವಾಗ ಸಂಭವಿಸಿರುವ ಸಾವು, ಅತ್ಯಾಚಾರ ಹಾಗೂ ಹಿಂಸೆ/ಕಾನೂನುಬಾಹಿರವಾಗಿ ಪೋಲೀಸರ ವಶದಲ್ಲಿರಿಸುವುದು, ಇವುಗಳಿಗೆ ಸಂಬಂಧಿಸಿದ ತನಿಖೆಯನ್ನು ವೈಯಕ್ತಿಕವಾಗಿ ಮೇಲ್ವಿಚಾರಣೆ ಮಾಡಿ ಪರಿಹಾರ ಕ್ರಮಗಳ / ಇಲಾಖಾ ಕ್ರಮಗಳ ಅನುಸರಣೆ ಮಾಡುವುದು.

15) ಪ್ರಕಟಣೆಗಳು ಹಾಗೂ ಮಾಧ್ಯಮ ಕಾರ್ಯಕ್ರಮಗಳ ಮೂಲಕ ಮಾನವ ಹಕ್ಕುಗಳನ್ನು ಕುರಿತ ಶಿಕ್ಷಣ ಹಾಗೂ ಅರಿವನ್ನು ಕ್ರಿಯಾಶೀಲತೆಯಿಂದ ಪ್ರಚಾರ ಮಾಡುವುದು.

16) ಪೊಲೀಸ್ ಅಧಿಕಾರಿಗಳ ನಡುವೆ ಪ್ರಸಾರ ಮಾಡಲು "ಕಾನೂನು ಜಾರಿಯಲ್ಲಿ ಮಾನವ ಹಕ್ಕುಗಳು" ವಾರ್ತಾಪತ್ರವನ್ನು ಪ್ರಕಟಿಸುವುದು.

ಸಹಿ/-

......................

ಮಹಾ ನಿರ್ದೇಶಕರು (ತನಿಖೆ)

ಸದಸ್ಯರು

**ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ**

ಸಂ.4/10/99-ಪಿಆರ್‌ಪಿ ಮತ್ತು ಪಿ

ಡಿಸೆಂಬರ್ 24, 1999

ಸಾರ್ವಜನಿಕ ಅಧಿಕಾರಿಗಳು ಅಮಾಯಕ ಜನರ ಮಾನವ ಹಕ್ಕುಗಳನ್ನು ಹತ್ತಿಕ್ಕುತ್ತಿರುವುದಾಗಿ, ತಮ್ಮ ಅಧಿಕಾರದ ದುರುಪಯೋಗ ಪಡಿಸಿಕೊಳ್ಳುತ್ತಿರುವುದಾಗಿ ಟೀಕೆಗಳು ಬರುತ್ತಿವೆ. ವಿಶೇಷವಾಗಿ ಪೊಲೀಸ್ ಅಧಿಕಾರಿಗಲು ಇದನ್ನು ಹೆಚ್ಚಾಗಿ ಮಾಡುತ್ತಿದ್ದಾರೆ ಎನ್ನುವುದರ ಮೇಲೆ ಮಾಧ್ಯಮಗಳು ಬೆಳಕು ಚೆಲ್ಲುತ್ತಿವೆ. ಈ ಕುರಿತು ಆಯೋಗ ಚಿಂತೆಗೀಡಾಗಿದೆ.

ಇದರ ಬಗೆಗೆ ಗಂಭೀರವಾಗಿ ವಿಚಾರ ಮಾಡಿದ ಆಯೋಗವು ಜಿಲ್ಲಾ ಫಿರ್ಯಾದು ಪ್ರಾಧಿಕಾರವೊಂದನ್ನು ಸ್ಥಾಪಿಸುವಂತೆ ರಾಜ್ಯ ಸರ್ಕಾರಗಳಿಗೆ ಬರೆಯಲು ತೀರ್ಮಾನಿಸಿದೆ. ಸಾರ್ವಜನಿಕ ಅಧಿಕಾರಿಗಳ ನಡವಳಿಕೆಯನ್ನು ಪರಿಶೀಲಿಸಲು ಮತ್ತು ಸಾರ್ವಜನಿಕರ ವಿರುದ್ಧ ಅವರಲ್ಲಿ ಬೆಳೆದು ಬರುತ್ತಿರುವ ಅಸಭ್ಯ ಹಾಗೂ ಒರಟು ನಡವಳಿಕೆಯ ಕುರಿತು, ನಿರಂಕುಶವಾಗಿ ಜನರನ್ನು ತಮ್ಮ ವಶಕ್ಕೆ ತೆಗೆದುಕೊಂಡು ಅವರನ್ನು ಬಂಧಿಸುವುದು, ಅವರ ಮೇಲೆ ಅಪರಾಧ ಪ್ರಕರಣಗಳ ತಪ್ಪು ಆಪಾದನೆಗಳನ್ನು ಹೊರಿಸಿ ಸಿಲುಕಿಸುವುದು, ಬಂಧನದಲ್ಲಿ ಹಿಂಸಾಚಾರ ನಡೆಸುವುದೇ ಮುಂತಾದ ಪೋಲೀಸರ ನಡವಳಿಕೆಯನ್ನು ಈ ಪ್ರಾಧಿಕಾರದ ಮೂಲಕ ಪರಿಶೀಲಿಸಲು ಆಯೋಗ ಉದ್ದೇಶಿಸಿದೆ. ಒಂದು ವೇಳೆ ಈ ಕುರಿತ ಆಪಾದನೆಗಳು ರಾಜ್ಯ ಮಾನವ ಹಕ್ಕುಗಳ ಆಯೋಗ (ಅಸ್ತಿತ್ವದಲ್ಲಿರುವ ರಾಜ್ಯಗಳಲ್ಲಿ) ಅಥವಾ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ಪರಿಶೀಲಿಸತಕ್ಕುದೆಂದು ಪ್ರಾಧಿಕಾರಕ್ಕೆ ಕಂಡು ಬಂದಲ್ಲಿ ಅಂತಹ ಪ್ರಕರಣಗಳನ್ನು ತಮ್ಮ ಶಿಫಾರಸುಗಳೊಂದಿಗೆ ಕಳುಹಿಸಿಕೊಡುವಂತೆ ಅದು ಕ್ರಮ ಕೈಗೊಳ್ಳಬಹುದು. ಆದ್ದರಿಂದ, (i) ಪ್ರಾಧಿಕಾರದ ಅಧ್ಯಕ್ಷರಾಗಿ ಜಿಲ್ಲಾ ಪ್ರಮುಖ ನ್ಯಾಯ ಮೂರ್ತಿಗಳು, (ii) ಜಿಲ್ಲಾ ಕಲೆಕ್ಟರ್/ಜಿಲ್ಲಾಧಿಕಾರಿಗಳು, (iii) ಪ್ರಾಧಿಕಾರದ ಸದಸ್ಯರಾಗಿ ಹಿರಿಯ ಪೊಲೀಸ್ ವರಿಷ್ಠಾಧಿಕಾರಿಗಳು/ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು ಹಾಗೂ (iv) ಪ್ರಾಧಿಕಾರದ ಅಧಿಕಾರ ಪ್ರಯುಕ್ತ ಸದಸ್ಯ -ಕಾರ್ಯದರ್ಶಿಗಳಾಗಿ ಪೊಲೀಸ್ ಸೂಪರಿಂಡೆಂಟೆಂಟ್/ಹೆಚ್ಚುವರಿ ಸೂಪರಿಂಡೆಂಟೆಂಟ್ ಆಫ್ ಪೊಲೀಸ್ ಇವರುಗಳನ್ನೊಳಗೊಂಡಂತೆ ಪ್ರಾಧಿಕಾರ ರಚನೆಯಾಗಬೇಕು. ಮೇಲೆ ತಿಳಿಸಿರುವಂತಹ ಸಾರ್ವಜನಿಕರ ಕುಂದುಕೊರತೆಗಳ ನಿವೇದನೆಗಳನ್ನು ಸಮಿತಿಯು ಪರಿಶೀಲಿಸತಕ್ಕದ್ದು.

ಕೇರಳ ರಾಜ್ಯದಲ್ಲಿ 'ಜಿಲ್ಲಾ ಮಾನವ ಹಕ್ಕುಗಳ ಪ್ರಾಧಿಕಾರ' ಎಂಬ ಹೆಸರಿನಲ್ಲಿ ಇಂತಹ ವ್ಯವಸ್ಥೆಯೊಂದು ಈಗಾಗಲೇ ಅಸ್ತಿತ್ವದಲ್ಲಿದೆ.

ಆಯಾ ಜಿಲ್ಲೆಗಳ ಮುಖ್ಯ ನ್ಯಾಯಾಧೀಶರು ಪ್ರಾಧಿಕಾರದ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಬೇಕಾದರೆ ಅದಕ್ಕೆ ಉಚ್ಚ ನ್ಯಾಯಾಲಯದ ಅನುಮತಿ ಅತ್ಯಗತ್ಯ. ಮೇಲೆ ತಿಳಿಸಲಾಗಿರುವ ವಿಷಯಗಳಿಗೆ ಸಂಬಂಧಿಸಿದಂತೆ ತಜ್ಞರಾದ ಜಿಲ್ಲಾ ನ್ಯಾಯಾಧೀಶರು ನ್ಯಾಯಾಸ್ಥಾನದಿಂದ ನೇರವಾಗಿ ಅವುಗಳ ನಿರ್ವಹಣೆ ಮಾಡುವುದಿಲ್ಲ ಅಥವಾ ಅವರಿಗೆ ಆಡಳಿತಾತ್ಮಕವಾದ ಯಾವುದೇ

ಮೇಲ್ವಿಚಾರಣೆಯ ಅಧಿಕಾರ ವ್ಯಾಪ್ತಿಯಾಗಲೀ ಇರುವುದಿಲ್ಲ. ಈ ಪರಿಸ್ಥಿತಿಯಲ್ಲಿ, ತಜ್ಞರಾದ ಜಿಲ್ಲಾ ನ್ಯಾಯಾಧೀಶರು ಜಿಲ್ಲಾ ಫಿರ್ಯಾದು ಪ್ರಾಧಿಕಾರದ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುವುದರಿಂದ ಅವರು ನ್ಯಾಯಾಸ್ಥಾನದಲ್ಲಿ ನಿರ್ವಹಿಸುವ ತಮ್ಮ ಕರ್ತವ್ಯಗಳಿಗೆ ಯಾವುದೇ ವಿಧವಾದ ತೊಡಕುಂಟಾಗುವುದಿಲ್ಲ. ಮಾತ್ರವಲ್ಲದೆ, ಜಿಲ್ಲಾ ಫಿರ್ಯಾದು ಪ್ರಾಧಿಕಾರದ ಅಧ್ಯಕ್ಷರಾಗಿರುವುದರಿಂದ ಅದರ ವಿಶ್ವಾಸಾರ್ಹತೆ ಹೆಚ್ಚುತ್ತದೆ ಹಾಗೂ ಸರಕಾರದ ಇನ್ನಿತರ ವಿಭಾಗಗಳಲ್ಲಿ ಅದರ ಬಗೆಗೆ ಗೌರವ ಭಾವನೆಗಳು ಮೂಡುವಂತಾಗುತ್ತದೆ. ಇದರಿಂದಾಗಿ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ಸಮಾಜದಲ್ಲಿ ಮಾನವ ಹಕ್ಕುಗಳ ರಕ್ಷಣೆ ಹಾಗೂ ಪ್ರಚಾರವನ್ನು ಪರಿಣಾಮಕಾರಿಯಾಗಿ ಕೈಗೊಳ್ಳಲು ಸಾಧ್ಯವಾಗುತ್ತದೆ.

ಆದ್ದರಿಂದ, ಉಚ್ಚ ನ್ಯಾಯಾಲಯವು ಈ ಕುರಿತಂತೆ ಅಗತ್ಯ ನಿರ್ದೇಶನಗಳನ್ನು ಮಾನ್ಯ ಜಿಲ್ಲಾ ನ್ಯಾಯಾಧೀಶರುಗಳಿಗೆ ಕಳುಹಿಸಿಕೊಡುವಂತೆ ತಮ್ಮ ಮೂಲಕ ಕೋರುತ್ತೇನೆ.

ಕೃತಜ್ಞತೆಗಳೊಂದಿಗೆ,

ತಮ್ಮ ವಿಶ್ವಾಸಿ,

ಸಹಿ/-

ರವರಿಗೆ,

ಎಲ್ಲಾ ಉಚ್ಚ ನ್ಯಾಯಾಲಯಗಳ ನ್ಯಾಯ ಮೂರ್ತಿಗಳಿಗೆ.

ಸದಸ್ಯರು

**ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ**

ಸಂ.4/10/99-ಪಿಆರ್‌ಪಿ ಮತ್ತು ಪಿ

ಡಿಸೆಂಬರ್ 24, 1999

ಮಾನ್ಯ ಮುಖ್ಯ ಮಂತ್ರಿಗಳಿಗೆ,

ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗಕ್ಕೆ ಸಾರ್ವಜನಿಕ ಅಧಿಕಾರಿಗಳ ವಿರುದ್ಧ ಹಾಗೂ ಪೊಲೀಸ್ ಉದ್ಯೋಗಿಗಳ ವಿರುದ್ಧ ಅಸಂಖ್ಯಾತ ದೂರುಗಳು ಬರುತ್ತಿವೆ. ಈ ದೂರುಗಳಲ್ಲಿ ಅವರು ಅಮಾಯಕ ಜನರ ಮಾನವ ಹಕ್ಕುಗಳನ್ನು ತುಳಿಯುವುದಕ್ಕಾಗಿ ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಳ್ಳುತ್ತಿರುವುದಾಗಿ ಟೀಕಿಸಲಾಗಿದೆ. ಅದರಲ್ಲೂ ವಿಶೇಷವಾಗಿ, ಪೊಲೀಸ್ ಉದ್ಯೋಗಸ್ಥರು ನಡೆಸುತ್ತಿರುವ ದೌರ್ಜನ್ಯಗಳ ಬಗೆಗೆ ಮಾಧ್ಯಮಗಳು ಬೆಳಕು ಚೆಲ್ಲಿವೆ. ಆದ್ದರಿಂದ, ಈ ಕುರಿತು ಆಳವಾಗಿ ವಿಚಾರ ಮಾಡಿದ ನಂತರ ಆಯೋಗವು, ಜಿಲ್ಲಾ ಫಿರ್ಯಾದು ಪ್ರಾಧಿಕಾರವೊಂದನ್ನು ರಚಿಸಲು ಉದ್ದೇಶಿಸಿ ಸಲಹೆ ಮಾಡಿದೆ. ಈ ಪ್ರಾಧಿಕಾರದ ಸದಸ್ಯರಾಗಿ ಆಯಾ ಜಿಲ್ಲೆಗಳ ಮುಖ್ಯ ಜಿಲ್ಲಾ ನ್ಯಾಯಾಧೀಶರು, ಜಿಲ್ಲಾ ಕಲೆಕ್ಟರರು/ಜಿಲ್ಲಾ ಸಾರ್ವಜನಿಕ ಆಡಳಿತದ ಮುಖ್ಯ ಅಧಿಕಾರಿಗಳಾದ ಜಿಲ್ಲಾಧಿಕಾರಿಗಳು/ಹಿರಿಯ ಸೂಪರಿಂಡೆಂಟೆಂಟ್ ಆಫ್ ಪೋಲೀಸರು/ ಜಿಲ್ಲಾ ಪೊಲೀಸ್ ಆಡಳಿತದ ಮುಖ್ಯಾಧಿಕಾರಿಗಳಾದ ಸೂಪರಿಂಡೆಂಟೆಂಟ್ ಆಫ್ ಪೋಲೀಸರು ಇರುತ್ತಾರೆ. ಸೂಪರಿಂಡೆಂಟೆಂಟ್ ಆಫ್ ಪೊಲೀಸ್/ಹೆಚ್ಚುವರಿ ಸೂಪರಿಂಡೆಂಟೆಂಟ್ ಆಫ್ ಪೊಲೀಸ್ ಇವರು ಪ್ರಾಧಿಕಾರದ ಅಧಿಕಾರ ಪ್ರಯುಕ್ತ ಸದಸ್ಯ ಕಾರ್ಯದರ್ಶಿಗಳಾಗಿದ್ದು ದೂರು ಅರ್ಜಿಗಳನ್ನು ಇವರಿಗೆ ಸಲ್ಲಿಸತಕ್ಕದ್ದಾಗಿರುತ್ತದೆ. ಅಗತ್ಯವಿದ್ದಲ್ಲಿ ಸೂಕ್ತ ಶಿಫಾರಸುಗಳನ್ನು ಇವರು ರಾಜ್ಯ ಮಾನವ ಹಕ್ಕುಗಳ ಆಯೋಗಕ್ಕೆ (ಅಸ್ತಿತ್ವದಲ್ಲಿದ್ದಲ್ಲಿ) ಅಥವಾ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗಕ್ಕೆ ಮಾಡಬಹುದಾಗಿರುತ್ತದೆ. ಕೇರಳ ರಾಜ್ಯದ ಎಲ್ಲ ಜಿಲ್ಲೆಗಳಲ್ಲೂ ಇಂತಹ ಇಂತಹ ಫಿರ್ಯಾದು ಪ್ರಾಧಿಕಾರಗಳ ರಚನೆಯಾಗಿದ್ದು, ' ಜಿಲ್ಲಾ ಮಾನವ ಹಕ್ಕುಗಳ ಪ್ರಾಧಿಕಾರ'ದ ಹೆಸರಿನಲ್ಲಿ ಕಾರ್ಯಪ್ರವೃತ್ತವಾಗಿವೆ. ಜಿಲ್ಲಾ ಫಿರ್ಯಾದು ಪ್ರಾಧಿಕಾರವು ಸಾರ್ವಜನಿಕ ಅಧಿಕಾರಿಗಳ ನಡವಳಿಕೆಯಲ್ಲಿ ಹೊಣೆಗಾರಿಕೆಯ ಮನೋಭಾವನೆಯನ್ನು ಹಾಗೂ ಸಾರ್ವಜನಿಕರ ನಡುವೆ ಕಾನೂನು ಸುವ್ಯವಸ್ಥೆಯ ಬಗೆಗೆ ವಿಧೇಯತೆ ಹಾಗೂ ವಿಶ್ವಾಸವನ್ನು ಮೂಡಿಸಲಿದೆ.

ಆದ್ದರಿಂದ ಜಿಲ್ಲಾ ಫಿರ್ಯಾದು ಪ್ರಾಧಿಕಾರವೊಂದನ್ನು ರಚನೆ ಮಾಡುವಂತೆ ಹಾಗೂ ಜಿಲ್ಲಾ ಕಲೆಕ್ಟರರು/ಜಿಲ್ಲಾಧಿಕಾರಿಗಳು ಹಾಗೂ ಹಿರಿಯ ಸೂಪರಿಂಡೆಂಟೆಂಟ್ ಆಫ್ ಪೋಲೀಸರು/ ಸೂಪರಿಂಡೆಂಟೆಂಟ್ ಆಫ್ ಪೋಲೀಸರು ಅದರ ಸದಸ್ಯರಾಗಿ ಕಾರ್ಯ ನಿರ್ವಹಿಸುವಂತೆ ಹಾಗೂ ಸೂಪರಿಂಡೆಂಟೆಂಟ್ ಆಫ್ ಪೊಲೀಸ್/ಹೆಚ್ಚುವರಿ ಸೂಪರಿಂಡೆಂಟೆಂಟ್ ಆಫ್ ಪೋಲೀಸರು ಪ್ರಾಧಿಕಾರದ ಅಧಿಕಾರ ಪ್ರಯುಕ್ತ ಸದಸ್ಯ -ಕಾರ್ಯದರ್ಶಿಗಳಾಗಿ ಕಾರ್ಯ ನಿರ್ವಹಿಸುವಂತೆ ಹಾಗೂ ಇದರ ರಚನೆ ಮತ್ತು ಕಾರ್ಯನಿರ್ವಹಣೆಯ ಕುರಿತು ಸಾರ್ವಜನಿಕ ಪ್ರಕಟಣೆಯ ಮೂಲಕ ಜಿಲ್ಲಾ ನ್ಯಾಯಾಧೀಶರು

ಆದರ ಅಧ್ಯಕ್ಷರಾಗಿದ್ದು ಕಾರ್ಯ ನಿರ್ವಹಿಸುವಂತೆ ಸೂಚನೆ ಕೊಡಬೇಕೆಂದು ತಮ್ಮನ್ನು ಕೋರುತ್ತೇನೆ. ಕಾನೂನು ಸುವ್ಯವಸ್ಥೆಯ ಕುರಿತು ಸಾರ್ವಜನಿಕರಲ್ಲಿ ವಿಶ್ವಾಸವನ್ನು ತುಂಬುವ ನಿಟ್ಟಿನಲ್ಲಿ ಈ ಪ್ರಯತ್ನವನ್ನು ಮಾಡಲಾಗುತ್ತಿದೆ. ಕೈಗೊಂಡ ಕ್ರಮದ ಕುರಿತು ದಯವಿಟ್ಟು ಸೂಚನೆ ನೀಡಬೇಕಾಗಿ ಕೋರಿಕೆ.

ಕೃತಜ್ಞತೆಗಳೊಂದಿಗೆ,

ತಮ್ಮ ವಿಶ್ವಾಸಿ,

ಸಹಿ/-

ರವರಿಗೆ,

ಎಲ್ಲ ರಾಜ್ಯಗಳ ಮುಖ್ಯ ಮಂತ್ರಿಗಳು/ ಎಲ್ಲ ಕೇಂದ್ರ ಶಾಸಿತ ಪ್ರದೇಶಗಳ ಆಡಳಿತಾಧಿಕಾರಿಗಳು

ಅಧ್ಯಾಯ V

# ಕಾರಾಗೃಹದಲ್ಲಿ ಮಾನವ ಹಕ್ಕುಗಳು

## ಕಾರಾಗೃಹಗಳಲ್ಲಿ ಬಳಲುತ್ತಿರುವ ಮಾನಸಿಕ ರೋಗಿಗಳ ಬಗೆಗೆ ಎಲ್ಲ ರಾಜ್ಯಗಳ ಮುಖ್ಯ ಮಂತ್ರಿಗಳಿಗೆ/ ಕೇಂದ್ರ ಶಾಸಿತ ಪ್ರದೇಶಗಳ ಆಡಳಿತಾಧಿಕಾರಿಗಳಿಗೆ ಬರೆಯಲಾಗಿರುವ ಪತ್ರ

ನ್ಯಾಯಮೂರ್ತಿ ರಂಗನಾಥ ಮಿಶ್ರಾ — ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ

ಅಧ್ಯಕ್ಷರು — 11ನೇ ಸೆಪ್ಟೆಂಬರ್ 1996

ಆತ್ಮೀಯರಾದ ಮುಖ್ಯ ಮಂತ್ರಿಗಳಿಗೆ,

ಮಾನಸಿಕ ಆರೋಗ್ಯ ಕಾನೂನು, 1997 ಪರಿಚ್ಛೇದ 2(1)ರಲ್ಲಿ ನಿರ್ವಚಿಸಲಾಗಿರುವಂತಹ ಹಲವು ಮಾನಸಿಕ ರೋಗಿಗಳು ಸಾಮಾನ್ಯ ಕಾರಾಗೃಹಗಳಲ್ಲಿ ಬಳಲುತ್ತಿದ್ದು, ಇವರನ್ನು ಇನ್ನಿತರ ಖೈದಿಗಳನ್ನು ನಡೆಸಿಕೊಳ್ಳುವ ರೀತಿಯಲ್ಲಿಯೇ ನಡೆಸಿಕೊಳ್ಳಲಾಗುತ್ತಿದೆ ಎಂಬುದು ನಮ್ಮ ಗಮನಕ್ಕೆ ಬಂದಿರುತ್ತದೆ. ಯಾವುದೇ ನಿಗದಿತ ಅವಧಿ ಇಲ್ಲದಿರುವಂತಹ ಇಂತಹ ಕೆಲವು ಸೆರೆವಾಸದ ಪ್ರಕರಣಗಳ ಬಗ್ಗೆ ಕೂಡ ಆಯೋಗಕ್ಕೆ ತಿಳಿದು ಬಂದಿರುತ್ತದೆ.

ಮಾನಸಿಕ ಅಸ್ವಸ್ಥತೆಯ ಕಾನೂನು, 1912 ಹಾಗೂ ಮಾನಸಿಕ ಅಸ್ವಸ್ಥತೆಯ ಕಾನೂನು 1977 ಇವುಗಳ ಬದಲಿಗೆ ಮಾನಸಿಕ ಆರೋಗ್ಯ ಕಾನೂನು 1.4.1993 ರಿಂದ ಜಾರಿಗೊಂಡಿದೆ.

ಮಾನಸಿಕ ಆರೋಗ್ಯ ಕಾನೂನು ಮಾನಸಿಕ ರೋಗಿಯನ್ನು ಕಾರಾಗೃಹದಲ್ಲಿರಿಸಲು ಅನುಮತಿಸುವುದಿಲ್ಲ. ಕಳೆದ ವಾರದಲ್ಲಿ ಪಟ್ನಾ ಉಚ್ಚ ನ್ಯಾಯಾಲಯವು ಕಾರಾಗೃಹಗಳಲ್ಲಿ ಬವಣೆ ಅನುಭವಿಸುತ್ತಿರುವ ಮಾನಸಿಕ ರೋಗಿಗಳನ್ನು ಮಾನಸಿಕ ರೋಗಿಗಳ ಆಸ್ಪತ್ರೆಗಳಿಗೆ ವರ್ಗಾಯಿಸುವಂತೆ ಬಿಹಾರ ರಾಜ್ಯ ಸರ್ಕಾರಕ್ಕೆ ನಿರ್ದೇಶಿಸಿದೆ.

ಪಟ್ನಾ ಉಚ್ಚ ನ್ಯಾಯಾಲಯವು ಕೈಗೊಂಡ ಕಾನೂನು ಸ್ಥಿತಿ ಹಾಗೂ ಆಜ್ಞೆಯ ಬಗೆಗೆ ತಮ್ಮ ಗಮನವನ್ನು ಸೆಳೆಯುವುದರ ಮೂಲಕ ನಾವು 31ನೇ ಅಕ್ಟೋಬರ್ 1998ರ ನಂತರ ಯಾವುದೇ ಮಾನಸಿಕ ರೋಗಿಯನ್ನು ಯಾವುದೇ ಕಾರಾಗೃಹದಲ್ಲಿ ಮುಂದುವರೆಸಲು ಅವಕಾಶ ನೀಡಬಾರದೆಂದು ತಮಗೆ ಸೂಚನೆ ನೀಡಲು ನಾವು ಇಚ್ಛಿಸುತ್ತೇವೆ. ಆದ್ದರಿಂದ, ಅದನ್ನು ಕಾರ್ಯರೂಪಕ್ಕೆ ತರುವಂತೆ ಕಾರಾಗೃಹದ ಇನ್ಸ್‌ಪೆಕ್ಟರ್ ಜನರಲ್ ಅವರಿಗೆ ಅಗತ್ಯ ಸೂಚನೆಗಳನ್ನು ನೀಡುವಂತೆ ತಮ್ಮನ್ನು ಕೋರುತ್ತೇವೆ.

1ನೇ ನವೆಂಬರ್ 1996ರ ನಂತರ ಆಯೋಗವು ಇಂತಹ ಕಾರಾಗೃಹಗಳಲ್ಲಿ ಯಾವುದಾದರೂ ಮಾನಸಿಕ ರೋಗಿಗಳು ಸೆರೆವಾಸವನ್ನು ಅನುಭವಿಸುತ್ತಿದ್ದಾರೆಯೇ ಎಂಬುದರ ಪರಿಶೀಲನೆಗೆ ತೊಡಗಲಿದೆ.

ಹಾಗೇನಾದರೂ ಕಂಡುಬಂದಲ್ಲಿ, ಮಾನಸಿಕ ರೋಗಿಗಳು ಅಥವಾ ಅವರ ಕುಟುಂಬದ ಸದಸ್ಯರಿಗೆ ರಾಜ್ಯ ಸರ್ಕಾರವು ತಪ್ಪಿತಸ್ಥ ಸಾರ್ವಜನಿಕ ಅಧಿಕಾರಿಯ ಕಡೆಯಿಂದ ವಸೂಲಿ ಮಾಡಿ ಪರಿಹಾರಧನ ನೀಡಬೇಕಾಗುತ್ತದೆ. ಎಲ್ಲ ಕಾರಾಗೃಹಗಳ ಇನ್ಸಪೆಕ್ಟರ್ ಜನರಲ್‌ಗಳು, ಜೈಲ್ ಸೂಪರಿಂಡೆಂಟೆಂಟ್‌ಗಳು ಮತ್ತು ನೌಕರರು ಹಾಗೂ ಜಿಲ್ಲಾ ಮಟ್ಟದ ಇತರ ಅಧಿಕಾರಿಗಳಿಗೆ ಈ ಪತ್ರದ ಪ್ರತಿಯನ್ನು ಕಳುಹಿಸಿಕೊಡುವುದು.

ಕೃತಜ್ಞತೆಗಳೊಂದಿಗೆ,

ತಮ್ಮ ವಿಶ್ವಾಸಿ,

ಸಹಿ/-

(ರಂಗನಾಥ ಮಿಶ್ರಾ)

ರವರಿಗೆ,

ಎಲ್ಲ ರಾಜ್ಯಗಳ ಮುಖ್ಯ ಮಂತ್ರಿಗಳಿಗೆ/ಕೇಂದ್ರ ಶಾಸಿತ ಪ್ರದೇಶಗಳ ಆಡಳಿತಾಧಿಕಾರಿಗಳಿಗೆ.

ನ್ಯಾಯಮೂರ್ತಿ ರಂಗನಾಥ ಮಿಶ್ರಾ

ಅಧ್ಯಕ್ಷರು

ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ

ಸೆಪ್ಟೆಂಬರ್ 25, 1996

ಆತ್ಮೀಯರೇ,

ಮಾನವ ಹಕ್ಕುಗಳ ಸಂರಕ್ಷಣೆಯ ಕಾನೂನು, 1993ರ ಪರಿಚ್ಛೇದ 12(C)ಯಲ್ಲಿ ನೀಡಲಾಗಿರುವ ಅವಕಾಶದಂತೆ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಒಂದು ಪ್ರಮುಖ ಕರ್ತವ್ಯವೆಂದರೆ -" ವ್ಯಕ್ತಿಗಳನ್ನು ಸೆರೆಯಲ್ಲಿರಿಸಿರುವ ಅಥವಾ ಚಿಕಿತ್ಸೆಗಾಗಿ, ಮನಪರಿವರ್ತನೆಗಾಗಿ ಅಥವಾ ರಕ್ಷಣೆಗಾಗಿ ಇರಿಸಲಾಗಿರುವ ರಾಜ್ಯ ಸರಕಾರದ ಅಧಿಕಾರದ ಕೆಳಗಿರುವ ಯಾವುದೇ ಕಾರಾಗೃಹ ಅಥವಾ ಯಾವುದೇ ಸಂಸ್ಥೆಯನ್ನು ರಾಜ್ಯ ಸರ್ಕಾರಕ್ಕೆ ಸೂಚನೆ ನೀಡಿದ ನಂತರ ಭೇಟಿ ಮಾಡುವ, ಅಲ್ಲಿನ ನಿವಾಸಿಗಳು ಬದುಕುತ್ತಿರುವ ಪರಿಸ್ಥಿತಿಯ ಅಧ್ಯಯನ ಮಾಡಿ ಅವುಗಳ ಆಧಾರದ ಮೇಲೆ ಶಿಫಾರಸು ಮಾಡುವುದು" ಆಗಿರುತ್ತದೆ. ಆಯೋಗವು ದೇಶದಾದ್ಯಂತ ಇರುವ ಹಲವಾರು ಕಾರಾಗೃಹಗಳ ಖೈದಿಗಳಿಂದ ಮಾನವ ಹಕ್ಕುಗಳ ಉಲ್ಲಂಘನೆಯಾಗಿದೆ ಎಂದು ಹೇಳಲಾಗಿರುವ ಹಲವು ದೂರುಗಳನ್ನು ಸ್ವೀಕರಿಸಿದೆ. ಕಾರಾಗೃಹದ ಆಡಳಿತದಲ್ಲಿ ಮರಳಿ ಸುಧಾರಣೆಯನ್ನು ತರುವ ಹಾಗೂ ವ್ಯವಸ್ಥೆಯಲ್ಲಿ ಸುಧಾರಣೆಯನ್ನು ತರುವ ಅವಶ್ಯಕತೆಯಿದೆ. ಇದಕ್ಕೆ ಸಂಬಂಧಿಸಿದಂತೆ, ಶತಮಾನದಷ್ಟು ಹಳೆಯದಾದ 1984ರ ಕಾರಾಗೃಹಗಳ ಕಾನೂನಿನ ಜಾಗದಲ್ಲಿ ಹೊಸ ಕಾರಾಗೃಹಗಳ ಕಾನೂನನ್ನು ಜಾರಿಗೆ ತರುವುದಕ್ಕಾಗಿ ನಾವು ಸಿದ್ಧಪಡಿಸಿದ ಕಾರಾಗೃಹಗಳ ಮಸೂದೆಯ ಪ್ರತಿಯನ್ನು ಲಗತ್ತಿಸಲಾಗಿರುವ ಪತ್ರ ಸಂಖ್ಯೆ ಎನ್‌ಎಚ್‌ಆರ್‌ಸಿ/ ಕಾರಾಗೃಹಗಳು/96/2 ದಿನಾಂಕ 29.8.96ರ ಬಗೆಗೆ ತಮ್ಮ ಗಮನವನ್ನು ಸೆಳೆಯಲು ನಾವು ಇಚ್ಛಿಸುತ್ತೇವೆ.

ಕಾರಾಗೃಹದ ಆಡಳಿತಕ್ಕೆ ಸಂಬಂಧಿಸಿದಂತೆ ಮತ್ತೊಂದು ಪ್ರಮುಖವಾದ ವಿಚಾರದೆಡೆಗೆ ತಮ್ಮ ಗಮನವನ್ನು ಸೆಳೆಯಲು ನಾನು ಇಚ್ಛಿಸುತ್ತೇನೆ. ಹೆಚ್ಚಿನ ರಾಜ್ಯಗಳಲ್ಲಿ ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ ಅವರ ಹುದ್ದೆಯನ್ನು ಭಾರತೀಯ ಆಡಳಿತ ಸೇವೆಯ ಅಥವಾ ಭಾರತೀಯ ಪೊಲೀಸ್ ಸೇವೆಯ ಅಧಿಕಾರಿಗಳಿಂದ ಆಯ್ಕೆ ಮಾಡಲಾಗುತ್ತದೆ. ಈ ಅಧಿಕಾರಿಗಳ ಸಾಮಾನ್ಯ ಅವಧಿಯು ಬಹಳ ಕಡಿಮೆಯದಾಗಿದ್ದು, ಈ ಅಧಿಕಾರಿಗಳಲ್ಲಿ ಹೆಚ್ಚಿನವರು ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ ಹುದ್ದೆಯು ಒಂದು ಅನಾನುಕೂಲಕರ ಹುದ್ದೆಯಾಗಿದೆಯೆಂದು ಭಾವಿಸಿ ಆಡಳಿತದ ಪ್ರಮುಖ ಜಾಲಕ್ಕೆ ವರ್ಗಾವಣೆಯಾಗುವುದನ್ನು ಎದುರು ನೋಡುತ್ತಿರುತ್ತಾರೆ. ಇದರ ಪರಿಣಾಮವಾಗಿ ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್‌ಗಳಾಗಿ ಆಯ್ಕೆಯಾದ ಅಧಿಕಾರಿಗಳ ವರ್ಗಾವಣೆ ಆಗಾಗ ನಡೆಯುತ್ತಿರುತ್ತದೆ. ಕೆಲವೊಮ್ಮೆ ಈ ಹುದ್ದೆ ಕೆಲವೆಡೆ ಬಹಳ ದೀರ್ಘ ಕಾಲದವರೆಗೆ ಖಾಲಿಯಾಗಿಯೇ ಇರುವುದೂ ಉಂಟು. ದೇಶದ ಕಾರಾಗೃಹದ ಆಡಳಿತದಲ್ಲಿ ಗುಣಾತ್ಮಕ ಸುಧಾರಣೆಯನ್ನು ತರಲು ಕಾರಾಗೃಹದ ಆಡಳಿತದ ಪ್ರಮುಖ ಸ್ಥಾನಕ್ಕೆ ನಡೆಯುವ ಆಯ್ಕೆಯು ಬಹಳ ಜಾಗರೂಕತೆಯಿಂದ ನಡೆಯಬೇಕಾಗಿದೆ. ಪ್ರತಿಭೆ ಹಾಗೂ ಸಮಗ್ರತೆಯೊಂದಿಗೆ ಶಿಸ್ತು ಹಾಗೂ ಮಾನವೀಯತೆಯ ಗುಣಗಳನ್ನು ಮೈಗೂಡಿಸಿಕೊಂಡಿರುವಂತಹ ಅಧಿಕಾರಿಯೊಬ್ಬರು ಈ ಹುದ್ದೆಗೆ ಆಯ್ಕೆ ಗೊಂಡು ಕಾರಾಗೃಹದ ಆಡಳಿತದಲ್ಲಿ ನಿರಂತರತೆಯನ್ನು ಹಾಗೂ ತೀವ್ರ ಚಲನಶೀಲತೆಯನ್ನು ತರುವ ದೃಷ್ಟಿಯಿಂದ ಒಂದು ನಿರ್ದಿಷ್ಟ ಅವಧಿಯವರೆಗೆ, ಅಂದರೆ, ಸುಮಾರು ಮೂರು ವರ್ಷಗಳರ ವರೆಗೆ ಮುಂದುವರೆಯಬೇಕು.

ಇದರಿಂದಾಗಿ ದೇಶದ ಕಾರಾಗೃಹಗಳ ಆಡಳಿತವನ್ನು ಉತ್ತಮಪಡಿಸುವ ದೃಷ್ಟಿಯಿಂದ ಕಾರಾಗೃಹ ಸೇವೆಗೆ ದಕ್ಷ ಹಾಗೂ ಸಮರ್ಥ ನಾಯಕತ್ವವನ್ನು ನೀಡಿದಂತಾಗುತ್ತದೆ.

ತಮ್ಮಿಂದ ಅನುಕೂಲಕರವಾದ ಪ್ರತಿಕ್ರಿಯೆಯನ್ನು ನಿರೀಕ್ಷಿಸುತ್ತೇವೆ.

ಕೃತಜ್ಞತೆಗಳೊಂದಿಗೆ,

ತಮ್ಮ ವಿಶ್ವಾಸಿ,

ಸಹಿ/-

**ರಂಗನಾಥ ಮಿಶ್ರಾ**

ರವರಿಗೆ,

ಎಲ್ಲ ರಾಜ್ಯಗಳ/ಕೇಂದ್ರ ಶಾಸಿತ ಪ್ರದೇಶಗಳ ಮುಖ್ಯಮಂತ್ರಿಗಳು.

## ವಿಚಾರಣಾಧೀನ ಖೈದಿಗಳ/ಕಾರಾಗೃಹದಲ್ಲಿ ದಂಡನೆಯನ್ನು ಅನುಭವಿಸುತ್ತಿರುವ ಖೈದಿಗಳ ಆರೋಗ್ಯ ಸೇವೆ -ನಿಯಮಿತ ಆರೋಗ್ಯ ತಪಾಸಣೆಯ ಕುರಿತಂತೆ ಎಲ್ಲ ಐಜಿ (ಕಾರಾಗೃಹಗಳು) /ಎಲ್ಲ ರಾಜ್ಯಗಳ ಮುಖ್ಯ ಕಾರ್ಯದರ್ಶಿಗಳು/ಎಲ್ಲ ಕೇಂದ್ರ ಶಾಸಿತ ಪ್ರದೇಶಗಳ ಆಡಳಿತಾಧಿಕಾರಿಗಳಿಗೆ ಬರೆಯಲಾಗಿರುವ ಪತ್ರ

ಲಕ್ಷ್ಮಿ ಸಿಂಗ್ — ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ

ಜಂಟಿ ಕಾರ್ಯದರ್ಶಿಗಳು — ಡಿ.ಓ. ಸಂ.4/3/99-ಪಿಆರ್‌ಪಿ ಮತ್ತು ಪಿ

11ನೇ ಫೆಬ್ರವರಿ, 1999

ಆತ್ಮೀಯರಾದ

ವಿಷಯ: **ದೇಶದ ವಿವಿಧ ಕಾರಾಗೃಹಗಳಲ್ಲಿ ವಿಚಾರಣಾಧೀನ ಖೈದಿಗಳಾಗಿ/ದಂಡನೆಯನ್ನು ಅನುಭವಿಸುತ್ತಿರುವ ಖೈದಿಗಳಾಗಿ ಇರುವವರ ಆರೋಗ್ಯ ಸೇವೆ - ನಿಯಮಿತ ಆರೋಗ್ಯ ತಪಾಸಣೆ -**

ಕಾರಾಗೃಹಗಳಲ್ಲಿ ಸೋಂಕು ರೋಗಗಳು ಹಬ್ಬುತ್ತಿರುವ ಒಂದು ಕಳವಳಕಾರಿ ವಿದ್ಯಮಾನವನ್ನು ಆಯೋಗವು ಗಮನಿಸಿದೆ. ಆಯೋಗವು ಸಂಘಟಿಸಿದ ಮಾದರಿ ಅಧ್ಯಯನವೊಂದು ಬಂಧನದಲ್ಲಿ ಸಂಭವಿಸುವ ಸುಮಾರು ಶೇ.79ರಷ್ಟು ಸಾವುಗಳು (ಬಂಧನದಲ್ಲಿರುವಾಗ ನಡೆಯುವ ದೌರ್ಜನ್ಯವನ್ನು ಹೊರತು ಪಡಿಸಿ) ಕ್ಷಯ ರೋಗದ ಸೋಂಕಿಗೆ ತುತ್ತಾಗುವುದರಿಂದ ಸಂಭವಿಸುತ್ತಿದೆಯೆಂದು ತಿಳಿದು ಬಂದಿರುತ್ತದೆ. ಈ ಅಂಕಿ ಅಂಶಗಳಿಗೆ ಸಾರ್ವತ್ರಿಕ ಮೌಲ್ಯ ಇಲ್ಲದಿರಬಹುದು, ಆದರೂ ಇಲ್ಲಿನ ಮನೋ ವೇದಕ ಹಾಗೂ ವ್ಯಥೆ ಹುಟ್ಟಿಸುವ ಅಂಶವೇನೆಂದರೆ, ಹಲವು ಪ್ರಕರಣಗಳಲ್ಲಿ ಖೈದಿಗಳಿಗೆ ನೀಡಲಾದ ಪ್ರಾರಂಭಿಕ ವೈದ್ಯಕೀಯ ನೆರವಿನಲ್ಲೇ ವಾಸಿಮಾಡುವ ಅವಧಿಯನ್ನು ಮೀರಿ ಕ್ಷಯ ರೋಗದ ಸೋಂಕು ಹರಡಿದೆ ಎಂಬುದು ಗೊತ್ತಾಗಿದೆ. ಕಾರಾಗೃಹಗಳಲ್ಲಿನ ಮಿತಿ ಮೀರಿದ ಜನಸಂದಣಿಯು ಸೋಂಕು ಹರಡಲು ಕಾರಣವಾಗಿದೆ.

ಇದರ ಒಂದು ಪರಿಹಾರೋಪಾಯವೆಂದರೆ ಖೈದಿಗಳಿಗೆ, ವಿಶೇಷವಾಗಿ, ಅವರು ಸೋಂಕು ರೋಗಗಳಿಗೆ ತುತ್ತಾಗದಂತೆ ನಿಯಮಿತಿವಾದ ವೈದ್ಯಕೀಯ ತಪಾಸಣೆಗೆ ಅವರನ್ನು ಒಳಪಡಿಸುವುದು. ಈ ನಿಟ್ಟಿನಲ್ಲಿ ಇಡುವ ಮೊದಲನೆಯ ಹೆಜ್ಜೆಯಾಗಿ, ಅಗತ್ಯವಾಗಿ ಎಲ್ಲ ಖೈದಿಗಳ ಪ್ರಾರಂಭಿಕ ವೈದ್ಯಕೀಯ ತಪಾಸಣೆಯನ್ನು ಕಾರಾಗೃಹದ ವೈದ್ಯರಿಂದ ಅಥವಾ ಸರಕಾರಿ ವೈದ್ಯರಿಂದ ನಡೆಯುವಂತೆ ಮಾಡುವುದು. ಒಂದು ವೇಳೆ ಅಂತಹ ಒಂದು ಸೇವಾ ಸೌಲಭ್ಯದ ಕೊರತೆಯಿದ್ದಲ್ಲಿ, ಸ್ವಯಂ ಸೇವಾ ಸಂಸ್ಥೆಗಳ ಅಥವಾ ಇಂಡಿಯನ್ ಮೆಡಿಕಲ್ ಅಸೋಸಿಯೇಶನ್‌ನಂತಹ ವೃತ್ತಿಪರ ಸಂಸ್ಥೆಗಳ ಸೇವೆಯನ್ನು ಪಡೆದುಕೊಳ್ಳುವುದು. ಇಂತಹ ವೈದ್ಯಕೀಯ ಸೇವೆಯ ನೆರವನ್ನು ನೀಡುವ ಸಂಸ್ಥೆಯು ಯಾವುದೇ ಆಗಿರಲಿ, ರಾಜ್ಯ ಸರಕಾರಗಳು ಹಾಗೂ ರಾಜ್ಯದ ಕಾರಾಗೃಹ ಆಡಳಿತದ ಅಧಿಕಾರಿಗಳು ಎಲ್ಲ ಖೈದಿಗಳ

ವೈದ್ಯಕೀಯ ಪರೀಕ್ಷೆಯು ತಕ್ಷಣವೇ ನಡೆಯುವಂತೆ ನೋಡಿಕೊಳ್ಳುವುದು ಅತ್ಯಗತ್ಯವಾಗಿದೆ. ಗುರುತಿಸಲಾದ ಆರೋಗ್ಯದ ಸಮಸ್ಯೆಗಳಿಗೆ ಸಮಯಕ್ಕೆ ಸರಿಯಾಗಿ ಹಾಗೂ ಪರಿಣಾಮಕಾರಿ ವೈದ್ಯಕೀಯ ಚಿಕಿತ್ಸೆಯನ್ನು ಕೊಡಿಸಬೇಕು.

ಕಾರಾಗೃಹಗಳಿಗೆ ದಾಖಲು ಮಾಡುವ ಖೈದಿಗಳ ಆರೋಗ್ಯ ಪರೀಕ್ಷೆಯ ನಮೂನೆಯನ್ನು ಒಳಗೊಂಡ, ದಿನಾಂಕ 22.1.99ರಂದು ನಡೆದ ಆಯೋಗದ ಸಭೆಯ ನಡಾವಳಿಯನ್ನು ಇದರೊಂದಿಗೆ ಲಗತ್ತಿಸಲಾಗಿದೆ. ಆದ್ದರಿಂದ ಲಗತ್ತಿಸಿರುವ ನಮೂನೆಗೆ ಅನುಸಾರವಾಗಿ ಎಲ್ಲ ರಾಜ್ಯ ಸರ್ಕಾರಗಳು ಹಾಗೂ ಕಾರಾಗೃಹದ ಆಡಳಿತಾಧಿಕಾರಿಗಳು ಖೈದಿಗಳ ಆರೋಗ್ಯ ತಪಾಸಣೆ ನಡೆಯುವಂತೆ ನೋಡಿಕೊಳ್ಳತಕ್ಕದ್ದು. ಸಾವಕಾಶ ಮಾಡದೆ ಇಂತಹ ವೈದ್ಯಕೀಯ ತಪಾಸಣೆಗಳು ನಡೆಸಲ್ಪಡುವಂತೆ ಹಾಗೂ ಆ ಕುರಿತ ಮಾಸಿಕ ವರದಿಯನ್ನು ಆಯೋಗಕ್ಕೆ ಕಳಿಸುವಂತೆ ಆಯೋಗ ಅಪೇಕ್ಷಿಸುತ್ತದೆ.

ಕೃತಜ್ಞತೆಗಳೊಂದಿಗೆ,

ತಮ್ಮ ವಿಶ್ವಾಸಿ,

ಸಹಿ/-

(ಲಕ್ಷ್ಮಿ ಸಿಂಗ್)

ರವರಿಗೆ,

ಎಲ್ಲ ರಾಜ್ಯಗಳ/ಕೇಂದ್ರ ಶಾಸಿತ ಪ್ರದೇಶಗಳ ಮುಖ್ಯ ಕಾರ್ಯದರ್ಶಿಗಳಿಗೆ.

## ಕಾರಾಗೃಹದಲ್ಲಿ ದಾಖಲಿಸಲ್ಪಡುವ ಖೈದಿಗಳ ಆರೋಗ್ಯ ಪರಿಶೋಧನೆಯ ನಮೂನೆ

ಪ್ರಕರಣ ಸಂ. ______________________

ಹೆಸರು ____________ ವಯಸ್ಸು _____ ಲಿಂಗ ______ ಹೆಬ್ಬೆರಳ ಗುರುತು ______

ತಂದೆಯ/ಗಂಡನ ಹೆಸರು ________________ ಉದ್ಯೋಗ ____________

ಕಾರಾಗೃಹಕ್ಕೆ ದಾಖಲಾದ ದಿನಾಂಕ ಮತ್ತು ಸಮಯ ____________________

ಗುರುತಿನ ಚಿಹ್ನೆಗಳು ______________________________
__________________________________________

ಹಿಂದೆ ಇದ್ದ ಅನಾರೋಗ್ಯದ ಚರಿತ್ರೆ

ಯಾವುದಾದರೂ ಕಾಯಿಲೆಯಿಂದ ನೀವು ಬಳಲುತ್ತಿದ್ದೀರಾ? ಹೌದು /ಇಲ್ಲ

ಹೌದು ಎಂದಲ್ಲಿ ಆ ಕಾಯಿಲೆಯ ಹೆಸರೇನು?

ಅದಕ್ಕಾಗಿ ನೀವು ಔಷಧೋಪಚಾರ ಪಡೆಯುತ್ತಿದ್ದೀರಾ? ಹೌದು /ಇಲ್ಲ

ಮೂರು ವಾರಗಳಾದರೂ ನಿಲ್ಲದ ಕೆಮ್ಮಿನಿಂದ ನೀವು ಬಳಲುತ್ತಿದ್ದೀರಾ? ಹೌದು /ಇಲ್ಲ

ಹಿಂದೆ ಯಾವುದಾದರೂ ಮಾದಕ ವಸ್ತುವಿನ ಬಳಕೆ ಮಾಡುತ್ತಿದ್ದಲ್ಲಿ ಅದರ ವಿವರ:

ಖೈದಿಗಳು ತಾವಾಗಿಯೇ ತಿಳಿಸಲು ಇಚ್ಛಿಸುವ ಯಾವುದಾದರೂ ವಿಚಾರಗಳಿದ್ದಲ್ಲಿ:

ದೈಹಿಕ ಪರೀಕ್ಷೆ:

ಎತ್ತರ. ________ ಸೆಂ.ಮೀ. ತೂಕ ________ ಕೆ.ಜಿ ಕೊನೆಯ ಮುಟ್ಟು ____________

1. ಕಳಾಹೀನತೆ : ಹೌದು/ಇಲ್ಲ
2. ಇಳಿಬಿದ್ದ ಚರ್ಮ, ಜೋಲು ಬಿದ್ದ ಮಾಂಸ ಖಂಡಗಳು : ಹೌದು/ಇಲ್ಲ
3. ಕ್ಲಬಿಂಗ್ : ಹೌದು/ಇಲ್ಲ
4. ಕ್ಯಾನಸಿಸ್ : ಹೌದು/ಇಲ್ಲ
5. ಇಕ್ಟೆರಸ್ : ಹೌದು/ಇಲ್ಲ
6. ಗಾಯಗಳೇನಾದರೂ ಇದ್ದಲ್ಲಿ

4. ಹೆಪಟೈಟಿಸ್/ಲೈಂಗಿಕ ರೋಗಗಳು ಸೇರಿದಂತೆ ಎಚ್ಐವಿ ಇದೆಯೇ ಎಂದು ತಿಳಿಯಲು ರಕ್ತ ಪರೀಕ್ಷೆ (ಕಾನೂನಿನ ಪ್ರಕಾರ ಅಗತ್ಯವಿದ್ದೆಡೆಗಳಲ್ಲಿ, ಖೈದಿಗಳಿಗೆ ತಿಳಿಸಿ ಅವರಿಂದ ಸಮ್ಮತಿ ಪಡೆದ ನಂತರ)

5. ಇನ್ನಿತರ ______________________________

ಒಟ್ಟು ಶಾರೀರಿಕ ವ್ಯವಸ್ಥೆಗೆ ಸಂಬಂಧಿಸಿದ ಪರೀಕ್ಷೆಗಳು

1. ನರವ್ಯೂಹ
2. ಹೃದಯ ಮತ್ತು ರಕ್ತ ನಾಳಗಳು
3. ಉಸಿರಾಟದ ವ್ಯವಸ್ಥೆ
4. ಕಣ್ಣು, ಕಿವಿ, ಮೂಗು, ಗಂಟಲು
5. ಜೀರ್ಣಾಂಗ ವ್ಯೂಹ
6. ಹಲ್ಲು ಮತ್ತು ವಸಡುಗಳು
7. ಮೂತ್ರ ಸಂಬಂಧಿ ವ್ಯವಸ್ಥೆ

ಆತ/ಆಕೆ ಬಳಲುತ್ತಿರುವ ಕಾಯಿಲೆ ಯಾವುದೆಂದು ಕಂಡು ಹಿಡಿದು ಚಿಕಿತ್ಸೆ ನೀಡಲು ಇಂತಹ ವೈದ್ಯಕೀಯಪರೀಕ್ಷೆನಡೆಸುವುದು ಅಗತ್ಯವಾಗಿದೆ ಎಂಬುದನ್ನು ಖೈದಿಗಳಿಗೆ ವಿವರಿಸಿ ಅವರ ಸಮ್ಮತಿ ಪಡೆದ ಮೇಲಷ್ಟೇ ಇದನ್ನು ಮಾಡಬೇಕು.

ವೈದ್ಯಕೀಯ ಪರೀಕ್ಷೆ ಪ್ರಾರಂಭಗೊಂಡ ದಿನಾಂಕ

ವೈದ್ಯಕೀಯ ಪರೀಕ್ಷೆ ಮುಕ್ತಾಯಗೊಂಡ ದಿನಾಂಕ

ವೈದ್ಯಾಧಿಕಾರಿಗಳು

## ನಿಗದಿತ ಅವಧಿಗೆ ಮುನ್ನ ಖೈದಿಗಳನ್ನು ಬಿಡುಗಡೆಗೊಳಿಸುವ ವಿಚಾರದಲ್ಲಿ ಕೈಗೊಳ್ಳಬೇಕಾದ ಕ್ರಮಗಳು/ಮಾರ್ಗಸೂಚಿಗಳನ್ನು ಕುರಿತಂತೆ ಎಲ್ಲ ಮುಖ್ಯ ಕಾರ್ಯದರ್ಶಿಗಳಿಗೆ/ಕೇಂದ್ರ ಶಾಸಿತ ಪ್ರದೇಶಗಳ ಆಡಳಿತಾಧಿಕಾರಿಗಳಿಗೆ ಬರೆಯಲಾಗಿರುವ ಪತ್ರ

ಸ್ಪೀಡ್ ಪೋಸ್ಟ್/ರಿಜಿಸ್ಟರ್ಡ್ ಪೋಸ್ಟ್‌ನ ಮೂಲಕ

**ಸಂ.233/10/97-98**
**ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ**
**(ಕಾನೂನು ವಿಭಾಗ)**

ದಿನಾಂಕ:8.11.99

ರವರಿಗೆ

ಎಲ್ಲ ರಾಜ್ಯಗಳ ಮುಖ್ಯ ಕಾರ್ಯದರ್ಶಿಗಳಿಗೆ/ಎಲ್ಲ ಕೇಂದ್ರ ಶಾಸಿತ ಪ್ರದೇಶಗಳ ಆಡಳಿತಾಧಿಕಾರಿಗಳಿಗೆ

ವಿಷಯ : ನಿಗದಿತ ಅವಧಿಗೆ ಮುನ್ನ ಖೈದಿಗಳ ಬಿಡಿಗಡೆ ಮಾಡುವ ಕುರಿತು ಕೈಗೊಳ್ಳಬೇಕಾದ ಕ್ರಮಗಳು/ ಮಾರ್ಗಸೂಚಿಗಳು

ಉಲ್ಲೇಖ: ಅದೇ ಸಂಖ್ಯೆಯ, ದಿನಾಂಕ 10.8.99ರ ಪತ್ರ

ಮಾನ್ಯರೇ,

ರಾಜ್ಯ ಸರ್ಕಾರದ ಅನುಸರಣೆಯನ್ನು ಲಗತ್ತಿಸಲಾಗಿರುವ ದಿನಾಂಕ 20.10.99ರ ಆಯೋಗದ ನಡಾವಳಿಯ ಪ್ರತಿಯೊಂದನ್ನು ಈ ಮೂಲಕ ಕಳುಹಿಸಿಕೊಡಲು ನನಗೆ ನಿರ್ದೇಶಿಸಲಾಗಿದೆ.

2. ಈ ವಿಚಾರಕ್ಕೆ ಸಂಬಂಧಿಸಿದಂತೆ ಕೈಗೊಳ್ಳಲಾಗಿರುವ ಕ್ರಮದ ವರದಿಯನ್ನು ದಿನಾಂಕ 24.12.1999ರಂದು ತಪ್ಪದೆ ಆಯೋಗದ ಮುಂದಿರಿಸಲು ಸಾಧ್ಯವಾಗುವಂತೆ ಸಲ್ಲಿಸಬೇಕೆಂದು ಈ ಮೂಲಕ ಕೋರಲಾಗಿದೆ.

ತಮ್ಮ ವಿಶ್ವಾಸಿ,

ಸಹಿ/-
**ಜಂಟಿ ರಿಜಿಸ್ಟ್ರಾರರು**
**(ಕಾನೂನು)**

ಅಡಕ: ಮೇಲಿನಂತೆ

# ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ

## ಸರ್ದಾರ್ ಪಟೇಲ್ ಭವನ
## ನವ ದೆಹಲಿ

ಆಪಾದಕರ ಹೆಸರು : ಶ್ರೀ ಕೆ. ಎನ್. ಶಶಿಧರನ್

ಪ್ರಕರಣ ಸಂ. : 233/10/97/98

ದಿನಾಂಕ : 20ನೇ ಅಕ್ಟೋಬರ್, 1999

**ಕೋರಂ**

**ನ್ಯಾಯಮೂರ್ತಿ ಶ್ರೀ ಎಂ. ಎನ್. ವೆಂಕಟಾಚಲಯ್ಯ, ಅಧ್ಯಕ್ಷರು**
**ನ್ಯಾಯಮೂರ್ತಿ ಡಾ.ಕೆ. ರಾಮಸ್ವಾಮಿ, ಸದಸ್ಯರು**
**ಶ್ರೀ ಸುದರ್ಶನ್ ಅಗರವಾಲ್, ಸದಸ್ಯರು**
**ಶ್ರೀ ವೀರೇಂದ್ರ ದಯಾಳ್, ಸದಸ್ಯರು**

## ನಡಾವಳಿಗಳು

ನಿಗದಿತ ಅವಧಿಗೆ ಮುನ್ನ ಬಿಡುಗಡೆಗೊಳಗಾಗುವ ಕಾರಾಗೃಹ ವಾಸದ ಶಿಕ್ಷೆಯನ್ನು ಅನುಭವಿಸುತ್ತಿರುವ ಖೈದಿಗಳ ಪ್ರಕರಣಗಳ ವಿಚಾರದಲ್ಲಿ ವಿವಿಧ ರಾಜ್ಯಗಳು ಅನ್ವಯಗೊಳಿಸಿಕೊಂಡಿರುವ ಮಾನ ದಂಡಗಳಲ್ಲಿ ಭಿನ್ನತೆಯಿರುವ ಪ್ರತಿಕೂಲ ಸಂಗತಿಯನ್ನು ಆಯೋಗವು ಪರಿಶೀಲಿಸಿದೆ. ಇದರ ಕಾರ್ಯ ನಿರ್ವಹಣೆಯ ಅಧಿಕಾರವು ಆಯೋಗದ ಅಧಿಕಾರ ವ್ಯಾಪ್ತಿಯ ಹೊರಗಿದ್ದು, ಸಂವಿಧಾನ ಪರಿಚ್ಛೇದ 72 ಮತ್ತು 161ಕ್ಕೆ ಸಂಬಂಧಿಸಿದಂತೆ ಆಡಳಿತಾಂಗದ ಅಧಿಕಾರಿಗಳಾದ ರಾಷ್ಟ್ರಾಧ್ಯಕ್ಷರು ಮತ್ತು ರಾಜ್ಯ ಪಾಲರುಗಳ ಅಧಿಕಾರಕ್ಕೆ ಸಂಬಂಧಿಸಿದೆ. ಕ್ಷಮಾದಾನ ಮಾಡುವ ಹಾಗೂ ಅವಧಿಗೆ ಮುನ್ನ ಬಿಡುಗಡೆಗೊಳಿಸುವ ವಿಚಾರಕ್ಕೆ ಸಂಬಂಧಿಸಿದ ಶಾಸನಬದ್ಧ ಅಧಿಕಾರಗಳು ರಾಜ್ಯ ಸರ್ಕಾರದ ವ್ಯಾಪ್ತಿಯಲ್ಲಿವೆ. 20ನೇ ಜುಲೈ 1999ರ ತನ್ನ ಹಿಂದಿನ ನಡಾವಳಿಯಲ್ಲಿ ಆಯೋಗ ಹೀಗೆ ದಾಖಲಿಸಿದೆ:

> "ವಿವಿಧ ರಾಜ್ಯಗಳಲ್ಲಿ ಅಸ್ತಿತ್ವದಲ್ಲಿರುವ ರೂಢಿಗಳನ್ನು ಮತ್ತು ಕ್ರಮಗಳನ್ನು ಗಮನದಲ್ಲಿರಿಸಿಕೊಂಡು, ಸಾಧ್ಯವಿರುವಷ್ಟು ಮಟ್ಟಿಗೆ ಹೆಚ್ಚಿನ ಒಂದು ಸಮಾನ ಮಾನದಂಡವನ್ನು ರೂಪಿಸುವ ಮತ್ತು ಅದನ್ನು ಸಾಧಿಸುವ ದೃಷ್ಟಿಯಿಂದ ನಿರ್ದಿಷ್ಟವಾದ ಕೆಲವು ಮಾಪಕಗಳನ್ನು ಆಯೋಗ ಅನ್ವೇಷಿಸಿದೆ. ಶ್ರೀ ಶಂಕರ್ ಸೇನ್(ಬಂಧನದಲ್ಲಿರುವವರಿಗೆ ನ್ಯಾಯ ಕಾರ್ಯಕ್ರಮದ ವಿಶೇಷ ವರದಿಗಾರರು ಹಾಗೂ ಮುಖ್ಯ ಸಂಯೋಜಕರು) ಮಹಾ ನಿರ್ದೇಶಕ (I) ರಾಗಿರುವ ಶ್ರೀ ಡಿ. ಆರ್. ಕಾರ್ತಿಕೇಯನ್, ಎನ್‌ಎಚ್‌ಆರ್‌ಸಿಯ ರಿಜಿಸ್ಟ್ರಾರ್ ಜನರಲ್ ಆಗಿರುವ

ಶ್ರೀ ಆರ್. ಸಿ. ಜೈನ್ ಅವರುಗಳನ್ನೊಳಗೊಂಡ ಸಮಿತಿಯೊಂದರ ಶಿಫಾರಸುಗಳ ಆಧಾರದ ಮೇಲೆ ಇದನ್ನು ಮಾಡಲಾಗಿದೆ.

ಈ ಮಾರ್ಗ ಸೂಚಿಗಳಿಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರಗಳ ಅಭಿಪ್ರಾಯ ಹಾಗೂ ಪ್ರತಿಕ್ರಿಯೆಗಳನ್ನು ಪಡೆಯಲು ಇದನ್ನು ಎಲ್ಲ ರಾಜ್ಯ ಸರ್ಕಾರಗಳಿಗೆ ಕಳುಹಿಸಿಕೊಡಲು ಆಯೋಗ ಇಚ್ಛಿಸುತ್ತದೆ. ಈ ವಿಚಾರವನ್ನು ಪರಿಗಣಿಸಿದ ರಾಜ್ಯ ಸರ್ಕಾರಗಳು

ಅಭಿಪ್ರಾಯಗಳನ್ನು ಮತ್ತು ಸಲಹೆಗಳನ್ನು ದಿನಾಂಕ 30ನೇ ಸೆಪ್ಟೆಂಬರ್ 1999ರಂದು ಅಥವಾ ಅದಕ್ಕೆ ಮುಂಚಿತವಾಗಿ ಆಯೋಗಕ್ಕೆ ತಲುಪುವಂತೆ ಕಳುಹಿಸಲು ಎಲ್ಲ ರಾಜ್ಯ ಸರ್ಕಾರಗಳ ಮುಖ್ಯ ಕಾರ್ಯದರ್ಶಿಗಳಿಗೆ ಪತ್ರ ಬರೆಯಲಾಗಿದೆ. ಪಡೆದ ಪ್ರತಿಕ್ರಿಯೆಗೆ ಅನುಸಾರವಾಗಿ ಈ ವಿಚಾರವನ್ನು ಮತ್ತೆ ಕೈಗೆತ್ತಿಕೊಳ್ಳಲಾಗುತ್ತದೆ. ಅದೇ ದಿನಾಂಕದಂದು ಈ ಮಾರ್ಗ ಸೂಚಿಗಳನ್ನು ಬೆಂಗಳೂರಿನ ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯೂನಿವರ್ಸಿಟಿಯವರ ಅಭಿಪ್ರಾಯ ಪಡೆದುಕೊಳ್ಳುವುದಕ್ಕಾಗಿ ಕಳುಹಿಸುವುದು.

ಇದಕ್ಕೆ ಪ್ರತಿಕ್ರಿಯಿಸಿದ ಕೆಲವುರಾಜ್ಯಗಳು ಹಾಗೂ ಕೇಂದ್ರ ಶಾಸಿತ ಪ್ರದೇಶಗಳನ್ನು ಈ ಕೆಳಗೆ ಹೆಸರಿಸಲಾಗಿದೆ:

1. ಲಕ್ಷದ್ವೀಪ
2. ದೆಹಲಿ
3. ಮಧ್ಯ ಪ್ರದೇಶ
4. ದಮನ್ ಮತ್ತು ದಿಯು
5. ದಾದ್ರಾ ಮತ್ತು ನಗರ್ ಹವೇಲಿ
6. ಒರಿಸ್ಸಾ
7. ಮೇಘಾಲಯ
8. ಉತ್ತರ ಪ್ರದೇಶ (ಮಧ್ಯಂತರ ವರದಿ)

ಸಮಯಾಭಾವದಿಂದಾಗಿ ಇತರ ರಾಜ್ಯಗಳು ಮತ್ತು ಕೇಂದ್ರ ಶಾಸಿತ ಪ್ರದೇಶಗಳು ಪ್ರತಿಕ್ರಿಯಿಸಿಲ್ಲ. ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯೂನಿವರ್ಸಿಟಿಯವರು ಕೂಡ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿಲ್ಲ.

ಆಯೋಗವು ಈ ವಿಚಾರವನ್ನು ಪರಿಗಣಿಸಿ ರಾಜ್ಯಗಳಿಂದ ಪಡೆದ ಸಲಹೆಗಳ ಮೇರೆಗೆ ಮಾರ್ಗಸೂಚಿಯೊಂದನ್ನು (ಅಡಕ 'ಎ') ಸಿದ್ಧಪಡಿಸಿದೆ.

ಈ ಮಾರ್ಗ ಸೂಚಿಗಳನ್ನು ರಾಜ್ಯಗಳಲ್ಲಿ ಅನುಷ್ಠಾನಗೊಳಿಸತಕ್ಕದ್ದು.

ಈ ಮಾರ್ಗಸೂಚಿಗಳಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಯಾವುದಾದರೂ ಅಂಶಗಳು ಪ್ರಸ್ತುತ ನಿಯಮಾವಳಿಗಳಿಗೆ ವ್ಯತಿರಿಕ್ತವಾಗಿದ್ದಲ್ಲಿ ರಾಜ್ಯ ಸರ್ಕಾರಗಳು ಆ ನಿಯಮಾವಳಿಗಳಲ್ಲಿ ಬದಲಾವಣೆಗಳನ್ನು ಮಾಡಿಕೊಳ್ಳುವುದರ ಮೂಲಕ ದೇಶದಾದ್ಯಂತ ಸಮಾನ ಮಾರ್ಗ ಸೂಚಿಗಳು ಅನುಷ್ಠಾನಗೊಳ್ಳುವಂತೆ ಮಾಡುವುದು. ಆರು ವಾರಗಳೊಳಗಾಗಿ ವರದಿ ಸಲ್ಲಿಸತಕ್ಕದ್ದು.

ಸಹಿ/-
**(ನ್ಯಾಯಮೂರ್ತಿ ಕೆ. ರಾಮ ಸ್ವಾಮಿ)**
ಸದಸ್ಯರು

ಸಹಿ/-
**(ಸುದರ್ಶನ್ ಅಗರವಾಲ್)**
ಸದಸ್ಯರು

ಸಹಿ/-
**( ವೀರೇಂದ್ರ ದಯಾಳ್)**
ಸದಸ್ಯರು

# ಅನುಬಂಧ - ಎ

ಜೀವಾವಧಿ ಶಿಕ್ಷೆಯನ್ನು ಅನುಭವಿಸುತ್ತಿರುವ ಖೈದಿಗಳಿಂದ ಮತ್ತು ಅಂತಹ ಖೈದಿಗಳ ಪರವಾಗಿ ಆಯೋಗಕ್ಕೆ ದೂರುಗಳು ಬರುತ್ತಿವೆ. ಕ್ಷಮಾದಾನ ಸಹಿತವಾಗಿ ಅಥವಾ ಕ್ಷಮಾದಾನ ರಹಿತವಾಗಿ 10ರಿಂದ 20 ವರ್ಷಗಳಷ್ಟು ದೀರ್ಘ ಕಾಲದ ವರೆಗಿನ ಶಿಕ್ಷೆಯನ್ನನುಭವಿಸಿದ ನಂತರವೂ ಅಂತಹವರಿಗೆ ಅವಧಿಗೆ ಮುನ್ನ ನೀಡುವ ಬಿಡುಗಡೆಯ ವಿಚಾರವನ್ನು ಪರಿಗಣಿಸಲಾಗಿಲ್ಲವೆಂಬುದನ್ನು ಈ ದೂರುಗಳು ಪ್ರಸ್ತಾಪಿಸಿರುತ್ತವೆ. ಪಡೆಯಲಾಗಿರುವ ಮಾಹಿತಿಗೆ ಅನುಗುಣವಾಗಿ ಮತ್ತು ಈ ಬಹುಮುಖ್ಯ ಪ್ರಶ್ನೆಗೆ ಸಂಬಂಧಿಸಿದ ಸಮಸ್ಯೆಗಳನ್ನು ಅತಿ ಸಮೀಪದಿಂದ ಅಧ್ಯಯನ ಮಾಡಿದಾಗ ದೇಶದ ಉದ್ದಗಲಕ್ಕೂ ಇರುವ ಕಾರಾಗೃಹಗಳಲ್ಲಿ ಜೀವಾವಧಿ ಶಿಕ್ಷೆ ಅನುಭವಿಸುತ್ತಿರುವ ಖೈದಿಗಳ ಮಾನವ ಹಕ್ಕುಗಳನ್ನು ಇದು ಬಾಧಿಸುತ್ತದೆ ಎಂಬುದು ತಿಳಿದು ಬಂದಿದೆ. ಅಪರಾಧ ದಂಡ ಸಂಹಿತೆ, 1973ರ ಪರಿಚ್ಛೇದ 432ರಲ್ಲಿ ನೀಡಲಾಗಿರುವ ಅವಕಾಶಗಳಿಗೆ ಅನುಗುಣವಾಗಿ ಅವಧಿಗೆ ಮುನ್ನ ಬಿಡುಗಡೆಗೊಳಿಸುವಲ್ಲಿ ಚಲಾಯಿಸಬಹುದಾದ ಅಧಿಕಾರವು ರಾಜ್ಯ ಸರ್ಕಾರಗಳಿಗಿದ್ದರೂ ಕೂಡ ರಾಜ್ಯ ಸರ್ಕಾರಗಳು ತಾವು ಚಲಾಯಿಸಬಹುದಾದ ಅಧಿಕಾರಕ್ಕೆ ಸಂಬಂಧಿಸಿದಂತೆ ಅನುಸರಿಸುತ್ತಿರುವ ರೂಢಿಗಳು ಮತ್ತು ಕ್ರಮಗಳು ಎಲ್ಲ ರಾಜ್ಯಗಳಲ್ಲಿ ಒಂದೇ ರೀತಿಯಾಗಿಲ್ಲ.

ಮಧ್ಯ ಪ್ರದೇಶ, ಪಂಜಾಬ್ ಮತ್ತು ಉತ್ತರ ಪ್ರದೇಶಗಳಂತಹ ಕೆಲವು ರಾಜ್ಯಗಳು ಈ ಕ್ರಮವನ್ನು ತಮ್ಮ ವಿಶೇಷ ಕಾನೂನಿನಲ್ಲಿ ಅಳವಡಿಸಿಕೊಂಡಿದ್ದರೆ ಮತ್ತೆ ಕೆಲವರು ಅದನ್ನು ತಮ್ಮ ನಿಯಮಾವಳಿಗಳಲ್ಲಿ ಅಥವಾ ಕಾರಾಗೃಹದ ಕೈಪಿಡಿಗಳಲ್ಲಿ ಅಳವಡಿಸಿಕೊಂಡಿದ್ದಾರೆ. ನಿಗದಿತ ಅವಧಿಗೆ ಮುನ್ನ ಬಿಡುಗಡೆಗೊಳ್ಳಲು ಅರ್ಹನಾದ ವ್ಯಕ್ತಿಯ ಅರ್ಹತೆಯ ಮಾನ ದಂಡಗಳು, ಸೆಂಟೆನ್ಸ್ ರಿವ್ಯೂ ಬೋರ್ಡ್‌ಗಳ ಸಂಯೋಜನೆ ಹಾಗೂ ಅವಧಿಗೆ ಮುನ್ನ ಬಿಡುಗಡೆಗೊಳಿಸುವ ವಿಚಾರವನ್ನು ಕೈಗೊಳ್ಳಲು ಇರುವ ಮಾರ್ಗ ಸೂಚಿಗಳು ಸೇರಿದಂತೆ

ಅದನ್ನು ಕೈಗೊಳ್ಳಲು ನೀಡಲಾಗಿರುವ ವ್ಯವಸ್ಥೆಯು ರಾಜ್ಯದಿಂದ ರಾಜ್ಯಕ್ಕೆ ವ್ಯತ್ಯಾಸದಿಂದ ಕೂಡಿವೆ. ಆದರೆ ಆಯೋಗಕ್ಕೆ ತಿಳಿದು ಬಂದಿರುವ ಪ್ರಕಾರ ಅವಧಿ ತೀರುವ ಮುನ್ನ ಬಿಡುಗಡೆಗೊಳಿಸಲು ಇರುವ ವ್ಯವಸ್ಥೆ/ಕ್ರಮವನ್ನು ಎಷ್ಟರ ಮಟ್ಟಿಗೆ ಕಡೆಗಣಿಸಲ್ಪಟ್ಟಿದೆ ಎಂದರೆ ಸೆಂಟೆನ್ಸ್ ರಿವ್ಯೂ ಬೋರ್ಡ್‌ಗಳು ಬಹಳ ಕಾಲದವರೆಗೆ ನಿಯಮಿತ ಅವಧಿಯಲ್ಲಿ ಸೇರಬೇಕಾದ ಸಭೆಯನ್ನೂ ಸೇರುತ್ತಿಲ್ಲ.

ಪ್ರಕರಣ ಸಂಖ್ಯೆ 233/10/97-98 ಹಾಗೂ ಅದಕ್ಕೆ ಸಂಬಂಧಿಸಿದಂತಹ ಇನ್ನಿತರ ಪ್ರಕರಣಗಳ ಕುರಿತ ದಿನಾಂಕ 4ನೇ ಮಾರ್ಚ್ 1999ರ ತನ್ನ ನಡಾವಳಿಯಲ್ಲಿ ಆಯೋಗವು ರಿಜಿಸ್ಟ್ರಾರ್ ಜನರಲ್ ಅವರಾದ ಶ್ರೀ ಆರ್. ಸಿ. ಜೈನ್. ಮಹಾ ನಿರ್ದೇಶಕರಾದ (I) ಶ್ರೀ ಡಿ. ಆರ್. ಕಾರ್ತಿಕೇಯನ್ ಹಾಗೂ ಶ್ರೀ ಶಂಕರ್ ಸೇನ್ (ಕಸ್ಟೋಡಿಯಲ್ ಜಸ್ಟಿಸ್ ಕಾರ್ಯಕ್ರಮದ ಸಂಯೋಜಕರು ಹಾಗೂ ವಿಶೇಷ ವರದಿಗಾರರು) ಅವರುಗಳು ಸಭೆ ಸೇರಿ ರಾಜ್ಯಗಳು ಅನುಸರಿಸಲು ಸಾಧ್ಯವಾಗುವಂತಹ ಒಂದೇ ರೀತಿಯ ಕ್ರಮಗಳನ್ನು ರೂಪಿಸುವಂತೆ ಶಿಫಾರಸು ಮಾಡಲು ಕೋರಿದೆ. ಶಿಫಾರಸುಗಳನ್ನು ಮಾಡುವಾಗ ಸಮಿತಿಯು ರಿವ್ಯೂ ಬೋರ್ಡ್‌ಗಳ ನೇಮಕಾತಿ, ಅವುಗಳ ಸಮರ್ಪಕ ಸಂಯೋಜನೆ ಇವುಗಳ ಕುರಿತು ಮಾತ್ರ ವಿಶೇಷ ಗಮನ ವಹಿಸದೆ ಅವುಗಳ ಸಭೆಗಳು ಕ್ಷಿಪ್ರ ಗತಿಯಲ್ಲಿ ನಡೆಯುವಂತೆ ಕೂಡ ನೋಡಿಕೊಳ್ಳಬೇಕು. ಇದರಿಂದಾಗಿ ಅವುಗಳ ದುರಾದೃಷ್ಟಕರ ಪರಿಸ್ಥಿತಿಯನ್ನು ಹಾಗೂ ಅವು

ಅಸ್ತಿತ್ವದಲ್ಲಿರುವೆಡೆಗಳಲ್ಲಿ ಕೂಡ ಬಹಳ ದೀರ್ಘ ಕಾಲದ ವರೆಗೆ ಸಭೆ ನಡೆಯದಿರುವುದನ್ನು ತಪ್ಪಿಸಬಹುದು.

ಅದಕ್ಕನುಗುಣವಾಗಿ, ಸಮಿತಿಯು ಈ ಸಮಸ್ಯೆಯ ಕುರಿತು ವಿಚಾರ ಮಾಡಿ ಈ ವಿಷಯಕ್ಕೆ ಸಂಬಂಧಿಸಿದಂತೆ ಸೂಕ್ತ ಕಾನೂನನ್ನು ಪರಿಗಣಿಸಿದೆ. ಹಾಗೂ ಹೆಚ್ಚಿನ ರಾಜ್ಯಗಳಿಂದ ಅವುಗಳು ನಿಗದಿತ ಅವಧಿಗೆ ಮುಂಚಿತವಾಗಿ ಬಿಡುಗಡೆ ಗೊಳಿಸುವ ವಿಚಾರಕ್ಕೆ ಸಂಬಂಧಿಸಿದಂತೆ ಅವುಗಳು ಅನುಸರಿಸುತ್ತಿರುವ ಕ್ರಮಗಳ ಕುರಿತು ಮಾಹಿತಿಯನ್ನು ಪಡೆದಿರುತ್ತವೆ. ಸಮಿತಿಯು ಸಮಾನ ಶಿಫಾರಸುಗಳನ್ನು ಪ್ರಸ್ತಾಪಿಸುವ ತನ್ನ ಪ್ರಯತ್ನದೊಂದಿಗೆ ನ್ಯಾಯಮೂರ್ತಿ ಎ. ಎನ್. ಮುಲ್ಲಾ 1980-83ರಲ್ಲಿ ನೇಮಿಸಿದ್ದ ಆಲ್ ಇಂಡಿಯಾ ಕಮಿಟಿ ಆನ್ ಜೈಲ್ ರಿಫಾರ್ಮ್ಸ್‌ನ ವರದಿ ಮತ್ತು ಶಿಫಾರಸುಗಳನ್ನು ಕೂಡ ಪರಿಶೀಲಿಸುವುದು ಸೂಕ್ತವಾಗಿರುತ್ತದೆ ಎಂಬುದನ್ನು ಪರಿಗಣಿಸಿದೆ. ಸಮಿತಿಯು ಈ ಕೆಳಗಿನಂತೆ ತನ್ನ ಅಭಿಪ್ರಾಯ ಹಾಗೂ ಶಿಫಾರಸುಗಳನ್ನು ಮುಂದಿರಿಸುತ್ತದೆ:

1. ದಂಡನೆಯನ್ನು ತಡೆ ಹಿಡಿಯುವುದು ಮತ್ತು ಕ್ಷಮಾದಾನ ನೀಡುವುದರ ಕುರಿತಂತೆ ಇರುವ ಸೂಕ್ತ ಅವಕಾಶಗಳು ಅಪರಾಧ ದಂಡ ಸಂಹಿತೆ ಪರಿಚ್ಛೇದ 432ರಲ್ಲಿ ಸೂಚಿತವಾಗಿದ್ದು ಅವುಗಳನ್ನು ಹೀಗೆ ಓದಿಕೊಳ್ಳಬಹುದಾಗಿದೆ:

"ದಂಡನೆಯನ್ನು ತಡೆ ಹಿಡಿಯುವ ಅಥವಾ ಕ್ಷಮಾ ದಾನ ನೀಡುವ ಅಧಿಕಾರ -

(1) ವ್ಯಕ್ತಿಯೊಬ್ಬನು ತಾನು ಗೈದ ಅಪರಾಧಕ್ಕಾಗಿ ದಂಡನೆಗೆ ಗುರಿಯಾದಾಗ, ಯಾವುದೇ ಸಮಯದಲ್ಲಿ, ತಕ್ಕ ಸರಕಾರವು ದಂಡನೆಗೆ ಒಳಗಾದ ವ್ಯಕ್ತಿಯ ಸಮ್ಮತಿಯಂತೆ ಯಾವುದೇ ನಿರ್ಬಂಧವಿಲ್ಲದೆ ಅಥವಾ ಯಾವುದಾದರೂ ನಿರ್ಬಂಧದ ಮೇರೆಗೆ ಆತನಿಗೆ ವಿಧಿಸಲಾಗುವ ಶಿಕ್ಷೆಯನ್ನು ಸಂಪೂರ್ಣವಾಗಿ ತಡೆ ಹಿಡಿಯಬಹುದು ಅಥವಾ ವಿಧಿಸಲಾಗಿರುವ ಶಿಕ್ಷೆಯಲ್ಲಿ ಭಾಗಶಃ ಕ್ಷಮಾ ದಾನ ನೀಡಬಹುದು.

(2) ಆಯಾ ಸರ್ಕಾರಗಳಿಗೆ ಅರ್ಜಿಯೊಂದು ಸಲ್ಲಿಸಲ್ಪಟ್ಟಾಗ ಆ ಅರ್ಜಿಯ ಮನವಿಯನ್ನು ಪರಿಗಣಿಸಬಹುದೇ ಅಥವಾ ತಿರಸ್ಕರಿಸಬೇಕೇ ಎಂಬುದಕ್ಕೆ ಸೂಕ್ತ ಕಾರಣಗಳ ಸಹಿತ, ವಿಚಾರಣೆ ನಡೆಸಿ ಅಪರಾಧ ನಿರ್ಣಯ ಮಾಡಿದ ನ್ಯಾಯಾಲಯದ ನ್ಯಾಯಾಧೀಶರ ಅಭಿಪ್ರಾಯವನ್ನು ಪಡೆಯತಕ್ಕದ್ದು. ನ್ಯಾಯಾಧೀಶರ ಅಂತಹ ಅಭಿಪ್ರಾಯಕ್ಕೆ ಇರಬಹುದಾದ ಸೂಕ್ತ ಕಾರಣಗಳ ಹೇಳಿಕೆ ಹಾಗೂ ಅಪರಾಧ ನಿರ್ಣಯ ಮಾಡಲು ನಡೆಸಿದ ವಿಚಾರಣೆಯ ದೃಢೀಕೃತ ದಾಖಲೆಗಳೊಂದಿಗೆ ತಿಳಿಸಬೇಕು.

(3) ಒಂದು ವೇಳೆ ಯಾವುದಾದರೊಂದು ನಿರ್ಬಂಧದ ಮೇಲೆ ದಂಡನೆಯು ತಡೆ ಹಿಡಿಯಲ್ಪಟ್ಟಾಗ ಅಥವಾ ಕ್ಷಮಾ ದಾನ ನೀಡಲ್ಪಟ್ಟಾಗ ತಕ್ಕ ಸರಕಾರದ ಅಭಿಪ್ರಾಯದಲ್ಲಿ ಆ ನಿರ್ಬಂಧ ನೆರವೇರಲ್ಪಟ್ಟಿಲ್ಲ ಎಂದಾದಲ್ಲಿ ಆ ಸರ್ಕಾರವು ಅಂತಹ ಶಿಕ್ಷೆಯ ತಡೆ ಹಿಡಿಯುವಿಕೆಯನ್ನು ಅಥವಾ ಕ್ಷಮಾ ದಾನವನ್ನು ರದ್ದು ಮಾಡಬಹುದು. ಹಾಗೂ ಆನಂತರ ಯಾವ ವ್ಯಕ್ತಿಯ ಪರವಾಗಿ ದಂಡನೆಯನ್ನು ತಡೆ ಹಿಡಿಯಲಾಗಿದೆಯೋ ಅಥವಾ ಕ್ಷಮಾ ದಾನ ನೀಡಲ್ಪಟ್ಟಿದೆಯೋ ಅಂತಹ ವ್ಯಕ್ತಿಯನ್ನು ಯಾವುದೇ ಪೊಲೀಸ್ ಅಧಿಕಾರಿ ವಾರಂಟ್ ರಹಿತವಾಗಿ ತನ್ನ ವಶಕ್ಕೆ

ತೆಗೆದುಕೊಳ್ಳಬಹುದು, ಇನ್ನೂ ಪೂರೈಸದೆ ಉಳಿದಿರುವ ದಂಡನೆಯನ್ನು ಅನುಭವಿಸುವ ಹಾಗೆ ಮರಳಿ ಕಾರಾಗೃಹಕ್ಕೆ ಕಳುಹಿಸಬಹುದು.

(4) ಯಾವ ನಿರ್ಬಂಧದ ಮೇರೆಗೆ ಮತ್ತು ಯಾರ ಪರವಾಗಿ ಈ ಪರಿಚ್ಛೇದದ ಅನ್ವಯ ದಂಡನೆಯನ್ನು ತಡೆ ಹಿಡಿಯಲಾಗಿದೆಯೋ ಅಥವಾ ಕ್ಷಮಾ ದಾನ ನೀಡಲಾಗಿದೆಯೋ ಆ ನಿರ್ಬಂಧವನ್ನು ದಂಡನೆಯಿಂದ ವಿನಾಯಿತಿ ಪಡೆದ ಆ ವ್ಯಕ್ತಿಯೇ ತನ್ನ ಸ್ವ ಇಚ್ಛೇ. ಮೇರೆಗೆ ನೆರವೇರಿಸಬೇಕು.

(5) ಸೂಕ್ತ ಸರ್ಕಾರವು ಸಾಮಾನ್ಯ ನಿಯಮಾವಳಿಗಳ ಮೂಲಕ ಅಥವಾ ವಿಶೇಷ ಆಜ್ಞೆಗಳ ಮೂಲಕ, ಶಿಕ್ಷೆಯ ತಡೆಗಾಗಿ ಆದೇಶ ನೀಡಬಹುದು. ಮತ್ತು ನಿರ್ಬಂಧದ ಮೇಲೆ ಮಾತ್ರವಲ್ಲದೆ, ಹದಿನೆಂಟು ವರ್ಷಗಳಿಗೆ ಮೇಲ್ಪಟ್ಟ ಪುರುಷನಿಗೆ ವಿಧಿಸಲಾದ ಯಾವುದೇ ಶಿಕ್ಷೆಯ ಪ್ರಮಾಣದಲ್ಲಿ (ದಂಡ ವಿಧಿಸುವ ಶಿಕ್ಷೆಯಲ್ಲದೆ) ಆ ವ್ಯಕ್ತಿ ಕಾರಾಗೃಹ ವಾಸದ ಶಿಕ್ಷೆಯನ್ನು ಅನುಭವಿಸುತ್ತಿರುವುದನ್ನು ಹೊರತು ಪಡಿಸಿ, ಅಂತಹ ಮನವಿಯನ್ನು ಸಲ್ಲಿಸಲು ಬರುವುದಿಲ್ಲ, ಹಾಗೂ-

(ಎ) ಅಂತಹ ಮನವಿಯನ್ನು ಶಿಕ್ಷೆ ವಿಧಿಸಲ್ಪಟ್ಟಿರುವ ವ್ಯಕ್ತಿ ಮಾಡಿಕೊಂಡಾಗ ಅದನ್ನು ಕಾರಾಗೃಹದ ಮುಖ್ಯ ಅಧಿಕಾರಿಗಳ ಮೂಲಕ ಸಲ್ಲಿಸ ಬಹುದು; ಅಥವಾ

(ಬಿ) ಅಂತಹ ಮನವಿಯನ್ನು ಇತರ ಯಾವುದೇ ವ್ಯಕ್ತಿ ಮಾಡಿಕೊಂಡಾಗ, ಆ ವ್ಯಕ್ತಿಯು ಕಾರಾಗೃಹ ವಾಸದ ಶಿಕ್ಷೆಯನ್ನು ಅನುಭವಿಸುತ್ತಿದ್ದಾನೆಂಬ ಪ್ರಕಟಣೆಯನ್ನು ಅದು ಹೊಂದಿರತಕ್ಕದ್ದು.

(6) ಮೇಲೆ ಹೇಳಿರುವ ಉಪ ಪರಿಚ್ಛೇದಗಳಲ್ಲಿ ನೀಡಲಾಗಿರುವ ಅವಕಾಶಗಳು ಕ್ರಿಮಿನಲ್ ನ್ಯಾಯಾಲಯ ಹೊರಡಿಸಿರುವ ಆಜ್ಞೆಗಳಿಗೆ ಈ ಸಂಹಿತೆಯ ಮೂಲಕ ಅಥವಾ ಯಾವುದೇ ವ್ಯಕ್ತಿಯ ಸ್ವಾತಂತ್ರ್ಯವನ್ನು ನಿರ್ಬಂಧಿಸುವ ಅಥವಾ ಆತನ ಮೇಲೆ ಆತನ ಆಸ್ತಿಯ ಮೇಲೆ ಯಾವುದೇ ನಿರ್ಬಂಧವನ್ನು ಹೊರಿಸುವ ಅಂತಹ ಕಾನೂನಿಗೆ ಅನ್ವಯಿಸುತ್ತದೆ.

(7) ಈ ಪರಿಚ್ಛೇದದಲ್ಲಿ ಮತ್ತು 433ನೇ ಪರಿಚ್ಛೇದದಲ್ಲಿ ಬಳಕೆಯಾಗಿರುವ

"ಸೂಕ್ತ ಸರ್ಕಾರ (appropriate Government) ಎಂದರೆ -

(ಎ) ಒಂದು ಅಪರಾಧಕ್ಕೆ ವಿರುದ್ಧವಾಗಿ ಶಿಕ್ಷೆಯಾಗಿರುವ ಪ್ರಕರಣಗಳಲ್ಲಿ, ಅಥವಾ ಉಪ - ಪರಿಚ್ಛೇದ (6)ರಲ್ಲಿ ಉಲ್ಲೇಖಿಸಲಾಗಿರುವ ಆಜ್ಞೆಯನ್ನು ಹೊರಡಿಸಲಾಗಿರುವಲ್ಲಿ, ಯಾವುದೇ ಕಾನೂನು ಕೇಂದ್ರದ ಕಾರ್ಯಾಡಳಿತದ ಅಧಿಕಾರಕ್ಕೆ ಸಂಬಂಧಿರುವವುಗಳಾಗಿದ್ದಲ್ಲಿ, ಕೇಂದ್ರ ಸರ್ಕಾರ

(ಬಿ) ಇತರ ಪ್ರಕರಣಗಳಲ್ಲಿ, ಯಾವ ರಾಜ್ಯದಲ್ಲಿ ಆಪಾದಿತನಿಗೆ ಶಿಕ್ಷೆ ವಿಧಿಸಲ್ಪಟ್ಟಿದೆಯೋ ಅಥವಾ ಅಂತಹ ಆಜ್ಞೆ ಹೊರಡಿಸಲ್ಪಟ್ಟಿದೆಯೋ ಅಲ್ಲಿನ ರಾಜ್ಯ ಸರ್ಕಾರ

1.1 ಪರಿಚ್ಛೇದ 432ರಲ್ಲಿರುವ ಶಿಕ್ಷೆಗೆ ಕ್ಷಮಾದಾನ ನೀಡುವ ಮೇಲಿನ ಅಧಿಕಾರವು ಪರಿಚ್ಛೇದ 433ಎ ಯಲ್ಲಿ ಮೊಟಕುಗೊಳಿಸಲ್ಪಟ್ಟಿದ್ದು ಅದು ಹೀಗೆ ಹೇಳುತ್ತದೆ:

"ಪರಿಚ್ಛೇದ 432ರಲ್ಲಿ ಯಾವುದೇ ಅಂಶಗಳಿದ್ದರೂ ಕೂಡ ಕೆಲವು ಪ್ರಕರಣಗಳಲ್ಲಿ

ಕ್ಷಮಾ ದಾನ ಅಥವಾ ಶಿಕ್ಷೆಯನ್ನು ಕಡಿಮೆಗೊಳಿಸುವುದರ ಮೇಲೆ ನಿರ್ಬಂಧವಿದೆ - ಕಾನೂನು ಪ್ರಕಾರ ಆರೋಪಿಯೊಬ್ಬನ ಅಪರಾಧ ಸಾಬೀತಾದ ನಂತರ ಅದಕ್ಕೆ ಮರಣ ದಂಡನೆ ಸೂಕ್ತ ಶಿಕ್ಷೆ ಎಂದು ಕಂಡು ಬಂದಿದ್ದರೂ ಆತನಿಗೆ ಜೀವಾವಧಿ ಶಿಕ್ಷೆ ವಿಧಿಸಲ್ಪಟ್ಟಿದ್ದಲ್ಲಿ, ಅಥವಾ ಅಪರಾಧ ನಿರ್ಣಯವಾದ ಮೇಲೆ ಅದಕ್ಕೆ ಮರಣ ದಂಡನೆ ವಿಧಿಸಲ್ಪಟ್ಟಾಗ ಪರಿಚ್ಛೇದ 433ರ ಪ್ರಕಾರ ಅದಕ್ಕೆ ಜೀವಾವಧಿ ಶಿಕ್ಷೆ ವಿಧಿಸಲ್ಪಟ್ಟಾಗ ಅಂತಹ ವ್ಯಕ್ತಿಗಳನ್ನು 14 ವರ್ಷಗಳ ಕಾರಾಗೃಹ ವಾಸ ಅನುಭವಿಸುವ ಮೊದಲೇ ಬಿಡುಗಡೆ ಮಾಡಲು ಬರುವುದಿಲ್ಲ".

## 2. ದಂಡನೆ ಪರಿಶೀಲನಾ ಮಂಡಲಿಯ ಸ್ಟೇಟ್ (ಸೆಂಟೆನ್ಸ್ ರಿವ್ಯೂ ಬೋರ್ಡಿನ ) ಸಂಯೋಜನೆ

ಖೈದಿಯೊಬ್ಬನಿಗೆ ವಿಧಿಸಲಾಗಿರುವ ದಂಡನೆಯನ್ನು ಪರಿಶೀಲಿಸಲು ಹಾಗೂ ತಕ್ಕ ಪ್ರಕರಣಗಳಲ್ಲಿ ಆತನನ್ನು ನಿಗದಿತ ಅವಧಿಗೆ ಮುನ್ನ ಬಿಡುಗಡೆ ಮಾಡುವಂತೆ ಶಿಫಾರಸು ಮಾಡಲು ಪ್ರತಿ ರಾಜ್ಯವು ಈ ಕೆಳಗಿನವರನ್ನೊಳಗೊಂಡ ಒಂದು ದಂಡನೆ ಪರಿಶೀಲನಾ ಮಂಡಲಿಯನ್ನು ರಚನೆ ಮಾಡಬೇಕಾಗಿದ್ದು ಅದು ಒಂದು ಖಾಯಂ ಸಂಸ್ಥೆಯಾಗಿರುತ್ತದೆ:

| | |
|---|---|
| 1. ಉಸ್ತುವಾರಿ ಸಚಿವರು, ಕಾರಾಗೃಹ ಇಲಾಖೆ /<br>ಪ್ರಮುಖ ಕಾರ್ಯದರ್ಶಿಗಳು,ಗೃಹ ಖಾತೆ/<br>ಉಸ್ತುವಾರಿ ಕಾರ್ಯದರ್ಶಿಗಳು, ಜೈಲು ವ್ಯವಹಾರಗಳು/<br>ಕಾನೂನು ಸುವ್ಯವಸ್ಥೆ- | ಅಧ್ಯಕ್ಷರು |
| 2. ಜ್ಯುಡಿಷಿಯಲ್ ಕಾರ್ಯದರ್ಶಿ/<br>ಲೀಗಲ್ ರಿಮೆಂಬ್ರೆನ್ಸರ್ | ಸದಸ್ಯರು |
| 3. ಉಚ್ಚ ನ್ಯಾಯಾಲಯದಿಂದ ನಾಮ<br>ನಿರ್ದೇಶಿತರಾದ ಒಬ್ಬ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರು | ಸದಸ್ಯರು |
| 4. ಮುಖ್ಯ ಪ್ರೊಬೇಷನ್ ಅದಿಕಾರಿ | ಸದಸ್ಯರು |
| 5. ಪೊಲೀಸ್ ಮಹಾ ನಿರ್ದೇಶಕರಿಂದ ನಾಮ ನಿರ್ದೇಶಿತರಾದ<br>ಪೊಲೀಸ್ ಐಜಿಗಿಂತ ಕೆಳಗಿನ ಶ್ರೇಣಿಯವರಲ್ಲದ ಒಬ್ಬ<br>ಹಿರಿಯ ಪೊಲೀಸ್ ಅಧಿಕಾರಿ | ಸದಸ್ಯರು |
| 6. ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್ | ಸದಸ್ಯ-<br>ಕಾರ್ಯದರ್ಶಿಗಳು |

ಮಂಡಲಿಯಲ್ಲಿ ಯಾವುದಾದರೊಂದು ಸ್ಥಾನ ಖಾಲಿಯಾಗಿ ಉಳಿದಿದ್ದಲ್ಲಿ, ಅಥವಾ ಮಂಡಲಿಯ ಸಭೆಯಲ್ಲಿ ಭಾಗವಹಿಸಲು ಯಾರಾದರೊಬ್ಬ ಸದಸ್ಯರು ತಪ್ಪಿದಲ್ಲಿ ಬರೀ ಆ ಒಂದು ಕಾರಣಕ್ಕಾಗಿ ಈ ದಂಡನೆ ಪರಿಶೀಲನಾ ಮಂಡಲಿಯ ಶಿಫಾರಸುಗಳನ್ನು ಮೌಲ್ಯರಹಿತವಾದುದು ಎಂದು

ತಳ್ಳಿಬಿಡಲಾಗುವುದಿಲ್ಲ. ಅಧ್ಯಕ್ಷರು ಸೇರಿದಂತೆ 4 ಮಂದಿಯ 'ಕೋರಂ' ಇದ್ದರೂ ಮಂಡಲಿಯು ಸಭೆ ಸೇರುವಂತಿಲ್ಲ.

### 2.2 ಮಂಡಲಿಯ ಸಭೆಗಳ ನಡುವಿನ ನಿಯಮಿತ ಅವಧಿ

ದಂಡನೆ ಪರಿಶೀಲನಾ ಮಂಡಲಿಯು ಕೊನೇ ಪಕ್ಷ 3 ತಿಂಗಳಿಗೊಮ್ಮೆಯಾದರೂ ರಾಜ್ಯ ಮುಖ್ಯ ಕಛೇರಿಯಲ್ಲಿ ಸಭೆ ಸೇರತಕ್ಕದ್ದು. ಸಂಪೂರ್ಣ ಕಾರ್ಯಕ್ರಮ ವಿವರಗಳಿರುವ ಕಾಗದ ಪತ್ರಗಳೊಂದಿಗೆ ಸದಸ್ಯರಿಗೆ 10 ದಿನಗಳಿಗೆ ಮುಂಚಿತವಾಗಿ ತಿಳುವಳಿಕೆ ಕೊಡತಕ್ಕದ್ದು.

ಆದಾಗ್ಯೂ, ಅಗತ್ಯಕ್ಕೆ ತಕ್ಕಂತೆ ಹೆಚ್ಚು ಬಾರಿ ಮಂಡಲಿಯ ಸಭೆಯನ್ನು ನಡೆಸಿ ಕೊಡುವುದು ಅಧ್ಯಕ್ಷರಿಗೆ ಬಿಟ್ಟ ವಿಷಯವಾಗಿರುತ್ತದೆ.

### 3. ನಿಗದಿತ ಅವಧಿಗೆ ಮುನ್ನ ಬಿಡುಗಡೆ ಪಡೆಯಲು ಇರಬೇಕಾದ ಅರ್ಹತೆಗಳು

ಈ ಕೆಳಗೆ ಸೂಚಿಸಲಾಗಿರುವ ಗುಂಪಿಗೆ ಸೇರಿದ ಖೈದಿಗಳು ರಾಜ್ಯ ದಂಡನೆ ಪರಿಶೀಲನಾ ಮಂಡಲಿಯ ಮೂಲಕ ಅವಧಿಗೆ ಮುನ್ನ ಬಿಡುಗಡೆಗೊಳ್ಳುವುದಕ್ಕೆ ಪರಿಗಣಿಸಲ್ಪಡಲು ಅರ್ಹರಾಗಿದ್ದಾರೆ:

3.1 ಅಪರಾಧ ದಂಡ ಸಂಹಿತೆಯ ಪರಿಚ್ಛೇದ 433 A ಯಲ್ಲಿ ನೀಡಲಾಗಿರುವ post provision ಪ್ರಕಾರ ಜೀವಾವಧಿ ಶಿಕ್ಷೆ ಅನುಭವಿಸುತ್ತಿರುವ ಪ್ರತಿಯೊಬ್ಬ ಖೈದಿ - ಪುರುಷ ಅಥವಾ ಸ್ತ್ರೀ. ಆತ/ಆಕೆ 14 ವರ್ಷಗಳ ಜೀವಾವಧಿ ಶಿಕ್ಷೆಯನ್ನು (ಅಂದರೆ ಕ್ಷಮಾದಾನವನ್ನು ಪಡೆಯದೆ) ಅನುಭವಿಸಿದ್ದಲ್ಲಿ ನಿಗದಿತ ಅವಧಿಗೆ ಮುನ್ನ ಕಾರಾಗೃಹದಿಂದ ಬಿಡುಗಡೆ ಹೊಂದುವುದಕ್ಕಾಗಿ ಪರಿಗಣಿಸಲ್ಪಡಲು ಅರ್ಹರಾಗಿದ್ದಾರೆ.

3.2 ಜೀವಾವಧಿ ಶಿಕ್ಷೆ ಅನುಭವಿಸುತ್ತಿರುವ, ಕ್ಷಮಾ ದಾನದೊಂದಿಗೆ ಕೊನೇ ಪಕ್ಷ 14

ವರ್ಷಗಳ ಕಾರಾಗೃಹ ವಾಸದ ಶಿಕ್ಷೆ ಅನುಭವಿಸಿದ ನಂತರ ಹಾಗೂ ಕ್ಷಮಾದಾನವನ್ನು ಪಡೆಯದೆ 10 ವರ್ಷಗಳ ನಿಜವಾದ ಕಾರಾಗೃಹ ವಾಸದ ಶಿಕ್ಷೆ ಅನುಭವಿಸಿದ ನಂತರ ಇತರ ಎಲ್ಲಾ ಪುರುಷ ಖೈದಿಗಳು ನಿಗದಿತ ಅವಧಿಗೆ ಮುನ್ನ ಪಡೆಯುವ ಬಿಡುಗಡೆಗಾಗಿ ಪರಿಗಣಿಸಲ್ಪಡಬಹುದು.

3.3 ಜೀವಾವಧಿ ಶಿಕ್ಷೆ ಅನುಭವಿಸುತ್ತಿರುವ, ಕ್ಷಮಾದಾನದೊಂದಿಗೆ ಕೊನೇ ಪಕ್ಷ 10 ವರ್ಷಗಳ ಕಾರಾಗೃಹ ವಾಸದ ಶಿಕ್ಷೆ ಅನುಭವಿಸಿದ ನಂತರ ಹಾಗೂ ಕ್ಷಮಾದಾನವನ್ನು ಪಡೆಯದೆ 7 ವರ್ಷಗಳ ನಿಜವಾದ ಕಾರಾಗೃಹ ವಾಸದ ಶಿಕ್ಷೆ ಅನುಭವಿಸಿದ ನಂತರ ಇತರ ಎಲ್ಲಾ ಮಹಿಳಾ ಖೈದಿಗಳು ನಿಗದಿತ ಅವಧಿಗೆ ಮುನ್ನ ಪಡೆಯುವ ಬಿಡುಗಡೆಗಾಗಿ ಪರಿಗಣಿಸಲ್ಪಡಬಹುದು.

3.4 ಜೀವಾವಧಿ ಶಿಕ್ಷೆಯನ್ನು ಅನುಭವಿಸುತ್ತಿರುವ, 65ವರ್ಷ ತುಂಬುತ್ತಿರುವ, ಕ್ಷಮಾದಾನದೊಂದಿಗೆ ಈಗಾಗಲೇ 7 ವರ್ಷಗಳ ಕಾರಾಗೃಹ ವಾಸದ ಶಿಕ್ಷೆ ಅನುಭವಿಸಿರುವ ಖೈದಿಗಳು.

3.5 ಜೀವಾವಧಿ ಶಿಕ್ಷೆಯ ದಂಡನೆಯನ್ನು ಅನುಭವಿಸುತ್ತಿದ್ದು ಮಾರಣಾಂತಿಕಕ ಕಾಯಿಲೆಗಳಾದ ಕ್ಯಾನ್ಸರ್, ಕ್ಷಯರೋಗ, ಏಡ್ಸ್, ಸರಿಪಡಿಸಲಾಗದ ಮೂತ್ರ ಪಿಂಡಗಳ ವೈಫಲ್ಯ, ಹೃದಯ ಸಂಬಂಧಿ ಹಾಗ ಃ ಉಸಿರಾಟದ ತೊಂದರೆಗಳು, ಕುಷ್ಠ ಮತ್ತಿತರ ಸೋಂಕು ರೋಗಗಳಿಗೆ ಒಳಗಾಗಿದ್ದು ಡಾಕ್ಟರರ ಮಂಡಲಿಯಿಂದ ಅದನ್ನು ದೃಢೀಕರಿಸಲ್ಪಟ್ಟಿದ್ದು, 5 ವರ್ಷಗಳ ನಿಜವಾದ ಕಾರಾಗೃಹ ವಾಸದ ಶಿಕ್ಷೆಯನ್ನು ಪೂರೈಸಿರುವವರು ಅಥವಾ ಕ್ಷಮಾದಾನದೊಂದಿ 7 ವರ್ಷಗಳಕಾರಾಗೃಹ ವಾಸದ ಶಿಕ್ಷೆಯನ್ನು ಅನುಭವಿಸುತ್ತಿರುವವರು.

## 4. ನಿಗದಿತ ಅವಧಿಗೆ ಮುನ್ನ ಬಿಡುಗೊಳ್ಳಲು ಅನರ್ಹರಾದವರು

ಜೀವಾವಧಿ ಶಿಕ್ಷೆ ಅಮುಭವಿಸುತ್ತಿರುವ ಈ ಕೆಳಗೆ ಸೂಚಿಸಲಾಗಿರುವ ಗುಂಪಿಗೆ ಸೇರಿದ ಖೈದಿಗಳು ಅವಧಿಗೆ ಮುನ್ನ ಬಿಡುಗಡೆಗೊಳ್ಳಲು ಪರಿಗಣಿಸಲ್ಪಡುವುದಿಲ್ಲ.

4.1 ಅತ್ಯಾಚಾರ, ಡಕಾಯಿತಿ, ಭಯೋತ್ಪಾದಕ ಕೃತ್ಯಗಳನ್ನು ನಡೆಸಿದ ಅಪರಾಧ ನಿರ್ಣಯಗೊಂಡ ಖೈದಿಗಳು

4.2 ಪೂರ್ವ ನಿಯೋಜಿತ ಸಂಘಟಿತ ಕೊಲೆಗಳನ್ನು ನಡೆಸಿದ ಅಪರಾಧ ನಿರ್ಣಯಗೊಂಡಿರುವ ಖೈದಿಗಳು

4.3 ವೃತ್ತಿಪರ ಬಾಡಿಗೆ ಕೊಲೆ ಗಡುಕರೆಂದು ಅಪರಾಧ ಸಾಬೀತಾದವರು

4.4 ಕಳ್ಳ ಸಾಗಾಣಿಕೆಯ ಕಾರ್ಯಾಚರಣೆ ನಡೆಸಿದ ಅಥವಾ ಸಾರ್ವಜನಿಕ ಸೇವೆಯಲ್ಲಿ ಕರ್ತವ್ಯ ನಿರತರಾಗಿದ್ದ ನೌಕರರ ಕೊಲೆ ಮಾಡಿದ ಅಪರಾಧ ಸಾಬೀತಾದವರು

## 5. ಪರಿಶೀಲನಾ ಮಂಡಲಿ ಪರಿಗಣಿಸಬೇಕಾದ ಪ್ರಕರಣಗಳಲ್ಲಿ ಅನುಸರಿಸಬೇಕಾದ ಕ್ರಮಗಳ ಕಾರ್ಯವಿಧಾನಗಳು

5.1 ರಾಜ್ಯ ಸರ್ಕಾರವು ಮುಂದಿರಿಸಿರುವ ಮಾನದಂಡಗಳ ಪ್ರಕಾರ ಅವಧಿಗೆ ಮುನ್ನ ಬಿಡುಗಡೆಗೊಳ್ಳಲು ಬಿಡುಗಡೆಗಾಗಿ ಪರಿಗಣಿಸಲ್ಪಟ್ಟ ಖೈದಿಯ ಪ್ರಕರಣವನ್ನು, ಜೀವಾವಧಿ ಶಿಕ್ಷೆಯನ್ನು ಅನುಭವಿಸುತ್ತಿರುವ ಖೈದಿ(ಗಳನ್ನು)ಯನ್ನು ಹೊಂದಿರುವ ಕೇಂದ್ರ ಜಿಲ್ಲಾ ಕಾರಾಗೃಹದ ಪ್ರತಿ ಸೂಪರಿಂಡೆಂಟೆಂಟರು ಕೊನೇ ಪಕ್ಷ ಮೂರು ತಿಂಗಳಿಗೆ ಮುನ್ನ ಪರಿಶೀಲನಾ ಕ್ರಮಕ್ಕೆ ತೊಡಗಬೇಕು.

5.2 ಖೈದಿಯ ಕೌಟುಂಬಿಕ ಹಾಗೂ ಸಾಮಾಜಿಕ ಹಿನ್ನೆಲೆ, ಗೈದ ಯಾವ ಆರೋಪಕ್ಕಾಗಿ ಅಪರಾಧ ನಿರ್ಣಯಗೊಂಡು ದಂಡನೆಗೆ ಗುರಿಯಾಗಿದ್ದಾನೆ/ಳೆ, ಯಾವ ಸನ್ನಿವೇಶದಲ್ಲಿ ಅಪರಾಧ ನಡೆಸಿದ್ದಾನೆ/ಳೆ ಇತ್ಯಾದಿ ವಿವರಗಳನ್ನೊಳಗೊಂಡ ವಿಸ್ತೃತವಾದ ಟಿಪ್ಪಣಿಯೊಂದನ್ನು ಜೈಲು ಸೂಪರಿಂಡೆಂಟೆಂಟರು ಸಿದ್ಧಪಡಿಸಬೇಕು. ಕಾರಾಗೃಹವಾಸದಲ್ಲಿದ್ದಾಗ ಖೈದಿಯ ನಡವಳಿಕೆ ಹಾಗೂ ವರ್ತನೆ, ಪರೀಕ್ಷಾರ್ಥ ರಜೆಯಲ್ಲಿ ಬಿಡುಗಡೆ ಮಾಡಿದ ಅವಧಿಯಲ್ಲಿ ಆತನ/ಆಕೆಯ ವರ್ತನೆ/ನಡವಳಿಕೆ, ವರ್ತನೆಯಲ್ಲಿ ಕಂಡು ಬರುತ್ತಿರುವ ಬದಲಾವಣೆ, ಆತ/ಆಕೆ ಕಾರಾಗೃಹದೊಳಗೆ ನಡೆಸಿದ ಯಾವುದೇ ಅಪರಾಧ ಹಾಗೂ ಅಂತಹ ಅಪರಾಧ (ಗಳಿಗೆ)ಕ್ಕೆ ನೀಡಲಾದ ಶಿಕ್ಷೆ ಇವುಗಳ ಬಗ್ಗೆ ಸಂಪೂರ್ಣವಾಗಿ ಅವಲೋಕನ ಮಾಡಿರಬೇಕು. ಖೈದಿಯ

ಅವಧಿಗೆ ಮುನ್ನ ಬಿಡುಗಡೆಗೊಳ್ಳಲು ಅರ್ಹನಾಗುವಂತೆ ವಿಶೇಷವಾಗಿ ಪರಿಗಣಿಸಲ್ಪಡುವ ರೀತಿಯಲ್ಲಿ ಆತನ ದೈಹಿಕ/ಮಾನಸಿಕ ಆರೋಗ್ಯ ಅಥವಾ ಯಾವುದೇ ಗಂಭೀರ ವ್ಯಾಧಿ ಇದ್ದಲ್ಲಿ ಬಗೆಗೆ ವರದಿಯೊಂದನ್ನು ಸಿದ್ಧಪಡಿಸಬೇಕು. ಈ ಟಿಪ್ಪಣಿಯು ಖೈದಿಯು ಅವಧಿಗೆ ಮುನ್ನ ಬಿಡುಗಡೆ ಹೊಂದಲು ಅಥವಾ ಹೊಂದದಿರಲು ಜೈಲು ಸೂಪರಿಂಡೆಂಟೆಂಟರು ಸಾಕಷ್ಟು ಕಾರಣಗಳನ್ನು ನೀಡಿ ಶಿಫಾರಸು ಮಾಡಿರಬೇಕು.

5.3 ಖೈದಿಯು ಯಾವ ಅಪರಾಧ ನಡೆಸಿದ್ದಕಾಗಿ ಅಪರಾಧ ನಿರ್ಣಯಗೊಂಡು ಶಿಕ್ಷೆಗೆ ಗುರಿಯಾದನೋ ಆ ಅಪರಾಧ ನಡೆಸಿದಾಗ ಆತ ಯಾವ ಸ್ಥಳದಲ್ಲಿ ಸಾಮಾನ್ಯವಾಗಿ ವಾಸಿಸುತ್ತಿದ್ದ ಅಥವಾ ಜೈಲಿನಿಂದ ಬಿಡುಗಡೆಯಾದ ನಂತರ ಆತ ಎಲ್ಲಿ ವಾಸ ಮಾಡಲು ಸಾಧ್ಯವೋ ಆ ಸ್ಥಳವನ್ನು ಜೈಲಿನ ಸೂಪರಿಂಡೆಂಟೆಂಟರು ಜಿಲ್ಲಾ ಪೊಲೀಸ್ ಸೂಪರಿಂಡೆಂಟಂಟರಿಗೆ ಸೂಚಿಸಬೇಕು. ಆದರೆ ಒಂದು ವೇಳೆ ಅಪರಾಧ ನಡೆದ ಸಮಯದಲ್ಲಿ ಖೈದಿಯು ವಾಸಿಸುತ್ತಿದ್ದ ಸ್ಥಳ ಆತ ಅಪರಾಧ ನಡೆಸಿದ ಸ್ಥಳ ಬೇರೆಯಾಗಿದ್ದರೆ ಅಪರಾಧ ನಡೆದ ಸ್ಥಳದ ವಿವರವನ್ನು ಜಿಲ್ಲಾ ಪೊಲೀಸ್ ಸೂಪರಿಂಡೆಂಟೆಂಟರಿಗೆ ನೀಡಬೇಕು. ಎರಡು ಪ್ರಕರಣಗಳಲ್ಲಿ ಕೂಡ ಖೈದಿಯ ಅವಧಿಗೆ ಮುನ್ನ ನಡೆಸುವ ಬಿಡುಗಡೆಯ ಕುರಿತು ಪೊಲೀಸ್ ಸೂಪರಿಂಡೆಂಟೆಂಟರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವ ರೀತಿಯಲ್ಲಿ ನೀಡಬೇಕು.

5.4 ಈ ವಿವರಗಳನ್ನು ಪಡೆದ ನಂತರ ಸಂಬಂಧಪಟ್ಟ ಪೊಲೀಸ್ ಸೂಪರಿಂಡೆಂಟೆಂಟ್ ಈ ವಿಚಾರದ ಬಗ್ಗೆ ತನಿಖೆಯೊಂದನ್ನು ತಕ್ಕ ಶ್ರೇಣಿಯ ಹಿರಿಯ ಪೊಲೀಸ್ ಅಧಿಕಾರಿಗಳ ಮೂಲಕ ನಡೆಸಿ ಆ ಪರಿಶೀಲನೆಯ ಆಧಾರದ ಮೇಲೆ ತನ್ನ ಶಿಫಾರಸುಗಳನ್ನು ಮಾಡುತ್ತಾನೆ. ಈ ಶಿಫಾರಸುಗಳನ್ನು ಮಾಡುವಾಗ ಸೂಪರಿಂಡೆಂಟೆಂಟ್ ಆಫ್ ಪೋಲೀಸರು ಅದನ್ನು ಯಾಂತ್ರಿಕವಾಗಿ ಮಾಡಕೂಡದು. ಹಾಗೂ ಅವಧಿಗೆ ಮುನ್ನ ನೀಡಲಾಗುವ ಖೈದಿಯ ಬಿಡುಗಡೆಯನ್ನು ಅಸಮರ್ಥನೀಯವಾದ ಮತ್ತು ಊಹೆಯ ಅಥವಾ ಕಲ್ಪನೆಯ ಆಧಾರದ ಮೇಲೆ ವಿರೋಧಿಸಕೂಡದು. ಖೈದಿಯನ್ನು ಅವಧಿಗೆ ಮುನ್ನ ಬಿಡುಗಡೆ ಮಾಡುವ ಪರವಾಗಿಲ್ಲದ ಸೂಪರಿಂಡೆಂಟೆಂಟ್ ಆಫ್ ಪೋಲೀಸರು ಅದನ್ನು ಯುಕ್ತವಾದ ಕಾರಣಗಳು ಹಾಗೂ ಸಾಮಗ್ರಿಗಳ ಮೂಲಕ ಸಮರ್ಥಿಸಿಕೊಳ್ಳತಕ್ಕದ್ದು. ಉಲ್ಲೇಖವನ್ನು ಪಡೆದ 30 ದಿನಗಳೊಳಗಾಗಿ ಸಂಬಂಧಪಟ್ಟ ಜೈಲಿನ ಸೂಪರಿಂಡೆಂಟೆಂಟರಿಗೆ ಅದನ್ನು ಹಿಂದಿರುಗಿಸಬೇಕು.

5.5 ಜೈಲ್ ಸೂಪರಿಂಡೆಂಟೆಂಟರು ತಮ್ಮ ಟಿಪ್ಪಣಿಯನ್ನು ಮುಖ್ಯ ಪ್ರೊಬೇಷನ್ ಅಧಿಕಾರಿಗೆ ಕೂಡ ಕಳಿಸಿಕೊಡತಕ್ಕದ್ದು. ಆ ಉಲ್ಲೇಖವನ್ನು ಪಡೆದ ಮುಖ್ಯ ಪ್ರೊಬೇಷನ್ ಅಧಿಕಾರಿ ತನಿಖೆ ನಡೆಸಿ ಅಥವಾ ಪ್ರೊಬೇಷನ್ ಅಧಿಕಾರಿಗಳ ಮೂಲಕ ತನಿಖೆ ನಡೆಯುವಂತೆ ಮಾಡಿ ಖೈದಿಯ ಕೌಟುಂಬಿಕ ಹಾಗೂ ಸಾಮಾಜಿಕ ಹಿನ್ನೆಲೆ, ಕುಟುಂಬದ ಸದಸ್ಯರ ಹಾಗೂ ಸಮಾಜದಲ್ಲಿ ಆತನಿಗೆ ದೊರೆಯಬಹುದಾದ ಸ್ವೀಕಾರ, ಪುನರ್ವಸತಿ ಹಾಗೂ ಉತ್ತಮ ನಾಗರಿಕನಾಗಿ ಅರ್ಥಪೂರ್ಣ ಬದುಕನ್ನು ಬಾಳಬಲ್ಲನೆಂದು ಖೈದಿಯ ಬಗೆಗೆ ತಾಳಿರುವ ಭರವಸೆಗಳ ಆಧಾರದ ಮೇಲೆ ಖೈದಿಗೆ ಅವಧಿಗೆ ಮುನ್ನ ಬಿಡುಗಡೆ ದೊರೆಯುವುದನ್ನು ಪರಿಗಣಿಸಬಹುದು. ಆತ ಕೇವಲ ಯಾಂತ್ರಿಕವಾಗಿ ಕಾರ್ಯ ನಿರ್ವಹಿಸುವುದರ ಮೂಲಕ ಪ್ರತಿಯೊಂದು ಪ್ರಕರಣವನ್ನು ಅವಧಿಗೆ ಮುನ್ನ ಬಿಡುಗಡೆ ಮಾಡುವಂತೆ ಶಿಫಾರಸು

ಮಾಡುವಂತಿಲ್ಲ. ಎರಡು ಪ್ರಕರಣಗಳಲ್ಲೂ ಆತ ತನ್ನ ಶಿಫಾರಸುಗಳನ್ನು ಕಾರಣಗಳ/ಸಾಮಗ್ರಿಗಳ ಮೂಲಕ ಸಮರ್ಥಿಸಿಕೊಳ್ಳಬೇಕಾಗಿರುತ್ತದೆ. ಉಲ್ಲೇಖ ತನ್ನ ಕೈ ಸೇರಿದ 30 ದಿನಗಳಿಗೆ ಮೀರಿ ತಡ ಮಾಡದಂತೆ ಮುಖ್ಯ ಪ್ರೊಬೇಷನ್ ಅಧಿಕಾರಿ ತನ್ನ ವರದಿ/ಶಿಫಾರಸುಗಳನ್ನು ಜೈಲಿನ ಸೂಪರಿಂಡೆಂಟೆಂಟರಿಗೆ ಸಲ್ಲಿಸತಕ್ಕದ್ದು.

5.6 ಸೂಪರಿಂಡೆಂಟೆಂಟ್ ಆಫ್ ಪೊಲೀಸ್ ಹಾಗೂ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳ ವರದಿ/ಶಿಫಾರಸುಗಳನ್ನು ಪಡೆದ ಜೇಲ್ ಸೂಪರಿಂಡೆಂಟೆಂಟ್ ಪ್ರಕರಣವನ್ನು ಕಾರಾಗೃಹದ ಮಹಾ ನಿರ್ದೇಶಕರಿಗೆ ಸೆಂಟೆನ್ಸ್ ರಿವ್ಯೂ ಬೋರ್ಡಿನ ಪ್ರಸ್ತಾಪಿತ ಸಭೆಗೆ ಕೊನೇ ಪಕ್ಷ ಒಂದು ತಿಂಗಳಿಗೆ ಮುಂಚಿತವಾಗಿ ಕಳುಹಿಸಿಕೊಡತಕ್ಕದ್ದು. ಜೇಲಿನ ಸೂಪರಿಂಡೆಂಟೆಂಟರ, ಸೂಪರಿಂಡೆಂಟೆಂಟ್ ಆಫ್ ಪೋಲೀಸರ ಹಾಗೂ ಮುಖ್ಯ ಪ್ರೊಬೇಷನ್ ಅಧಿಕಾರಿಗಳ ವರದಿ/ಶಿಫಾರಸುಗಳನ್ನು ಗಮನದಲ್ಲಿರಿಸಿಕೊಂಡ ಇನ್ಸ್‌ಪೆಕ್ಟರ್ ಜನರಲ್ ಆಫ್ ಪ್ರಿಸನ್ಸ್ ಅವರು ಖೈದಿಯನ್ನು ಅವಧಿಗೆ ಮುನ್ನ ಮಾಡುವ ಬಿಡುಗಡೆಯ ಬಗೆಗೆ ತನ್ನ ಶಿಫಾರಸುಗಳ್ನು ಮಾಡಬೇಕು ಅಥವಾ ಸರ್ಕಾರದ ಮುಂದಿರಿಸಿರುವ ಸಾಮಾನ್ಯ ಅಥವಾ ವಿಶೇಷ ಕಾನೂನನ್ನು ಗಮನದಲ್ಲಿರಿಸಿಕೊಂಡು ಅದನ್ನು ಮಾಡಬೇಕು. ಅಪೆಕ್ಸ್ ಕೋರ್ಟ್ ಮತ್ತು ವಿಶೇಷ ಉಚ್ಛ ನ್ಯಾಯಾಲಯಗಳ ಅವಧಿಗೆ ಮುನ್ನ ಮಾಡುವ ಖೈದಿಯ ಬಿಡುಗಡೆಯ ಕುರಿತು ಹಾಕಿ ಕೊಂಡಿರುವ ವಿವಿಧ ಮಾದರಿಗಳು ಹಾಗೂ ಮಾರ್ಗಸೂಚಿಗಳನ್ನು ಕೂಡ ಈ ಸಂದರ್ಭದಲ್ಲಿ ಗಮನದಲ್ಲಿರಿಸಿಕೊಂಡಿರಬೇಕು.

## 6. ಪರಿಶೀಲನಾ ಮಂಡಲಿಗಾಗಿ ಕ್ರಮಗಳು ಹಾಗೂ ಮಾರ್ಗಸೂಚಿಗಳು:

6.1 ಇನ್ಸ್‌ಪೆಕ್ಟರ್ ಜನರಲ್ ಆಫ್ ಪ್ರಿಸನ್ಸ್ ಇವರು ದಂಡನೆ ಪರಿಶೀಲನಾ ಮಂಡಲಿಯ ಸಭೆಯನ್ನು ಒಂದು ಗೊತ್ತಾದ ಸಮಯ ಹಾಗೂ ದಿನಾಂಕದಂದು ರಾಜ್ಯ ಮಟ್ಟದ ಮುಖ್ಯ ಕಛೇರಿಯಲ್ಲಿ ನಡೆಸಿಕೊಡುತ್ತಾರೆ. ನಡೆಸಲು ನಿಗದಿಯಾದ ಸಭೆಯ ಕುರಿತು ಮಂಡಲಿಯ ಅಧ್ಯಕ್ಷರು ಹಾಗೂ ಸದಸ್ಯರಿಗೆ ಕೊನೇ ಪಕ್ಷ 10 ದಿನಗಳಿಗೆ ಮುಂಚಿತವಾಗಿ ಸಂಪೂರ್ಣ ಕಾರ್ಯಕ್ರಮ ಪಟ್ಟಿಯನ್ನು ಕುರಿತ ಕಾಗದ ಪತ್ರಗಳೊಂದಿಗೆ ಅಂದರೆ, ಜೈಲು ಸೂಪರಿಂಡೆಂಟೆಂಟರ ಟಿಪ್ಪಣಿ, ಸೂಪರಿಂಡೆಂಟೆಂಟ್ ಆಫ್ ಪೋಲೀಸರ, ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳ ಶಿಫಾರಸುಗಳು ಹಾಗೂ ದಾಖಲೆ ಪತ್ರಗಳೊಂದಿಗೆ ತಿಳುವಳಿಕೆ ನೀಡಲಾಗುತ್ತದೆ.

6.2 ಸರ್ವ ಸಾಧಾರಣವಾಗಿ ಸಭೆಯನ್ನು ಬೋರ್ಡಿನ ಅಧ್ಯಕ್ಷರೇ ಅಧ್ಯಕ್ಷತೆ ವಹಿಸಿ ನಡೆಸಿಕೊಡಬೇಕು. ಕಾರಣಾಂತರಗಳಿಂದ ಅವರು ಸಭೆಯಲ್ಲಿ ಹಾಜರಿರುವುದು ಸಾಧ್ಯವಾಗದೆ ಹೋದಲ್ಲಿ, ನ್ಯಾಯಾಸ್ಥಾನದ ಕಾರ್ಯದರ್ಶಿ ಹಾಗೂ ಕಾನೂನು ಪ್ರತಿನಿಧಿಗಳಾಗಿರುವವರು (ಜ್ಯುಡಿಷಿಯಲ್ ಸೆಕ್ರೆಟರಿ-ಕಮ್-ಲೀಗಲ್ ರಿಮೆಂಬ್ರೆನ್ಸರ್) ಅಧ್ಯಕ್ಷತೆ ವಹಿಸಬೇಕು. ಸದಸ್ಯ ಕಾರ್ಯದರ್ಶಿಗಳು (ಇನ್ಸ್‌ಪೆಕ್ಟರ್ ಜನರಲ್ ಆಫ್ ಪ್ರಿಸನ್ಸ್)ಸೆಂಟೆನ್ಸ್ ರಿವ್ಯೂ ಬೋರ್ಡ್‌ನ ಮುಂದೆ ಪರಿಗಣಿಸಲ್ಪಟ್ಟಿರುವ ಪ್ರತಿಯೊಬ್ಬ ಖೈದಿಯ ಪ್ರಕರಣವನ್ನು ಸಾದರಪಡಿಸಬೇಕು. ಮಂಡಲಿಯು ಪ್ರಕರಣವನ್ನು ಪರಿಶೀಲಿಸಿ ಒಂದು ಅಭಿಪ್ರಾಯಕ್ಕೆ ಬರುತ್ತದೆ. ಪ್ರಾಯೋಗಿಕವಾಗಿ ಸಾಧ್ಯವಿರುವಷ್ಟು ಮಟ್ಟಿಗೆ, ಸೆಂಟೆನ್ಸ್ ರಿವ್ಯೂ ಬೋರ್ಡ್ ಒಮ್ಮತಕ್ಕೆ

ಬರಲು ಪ್ರಯತ್ನಿಸುತ್ತದೆ. ಒಂದು ವೇಳೆ ಅಸಮ್ಮತಿಯೇನಾದರೂ ವ್ಯಕ್ತವಾದಲ್ಲಿ ಬಹುಮತದ ಅಭಿಪ್ರಾಯಕ್ಕೆ ಮಾನ್ಯತೆ ನೀಡುವುದರ ಮೂಲಕ ಬೋರ್ಡ್ ತೀರ್ಮಾನ ಕೈಗೊಳ್ಳುತ್ತದೆ.

6.3 ನಿರ್ದಿಷ್ಟ ಖೈದಿಯೊಬ್ಬನ ನಿಗದಿತ ಅವಧಿಗೆ ಮೊದಲಿನ ಬಿಡುಗಡೆಯ ಪ್ರಕರಣವನ್ನು ಪರಿಗಣಿಸುವಾಗ ಬೋರ್ಡ್ ರಾಜ್ಯ ಸರ್ಕಾರ ಅಥವಾ ನ್ಯಾಯಾಲಯಗಳು ಕ್ಷಮಾದಾನವನ್ನು ಕುರಿತು ರೂಪಿಸಿರುವ ಸಾಮಾನ್ಯ ನಿಯಮಗಳನ್ನು ಹಾಗೂ ಹಿಂದಿನ ಇಂತಹ ನಿದರ್ಶನಗಳನ್ನು ಗಮನದಲ್ಲಿರಿಸಿಕೊಳ್ಳುತ್ತದೆ. ಖೈದಿಯ ಬದುಕಿನ ಕಲ್ಯಾಣ ಹಾಗೂ ಆ ಮೂಲಕ ವಿಶಾಲವಾದ ಸಮಾಜಕ್ಕೆ ಒಟ್ಟಾರೆಯಾಗಿ ಒಳಿತಾಗುವುದು ಸೆಂಟೆನ್ಸ್ ರಿವ್ಯೂ ಬೋರ್ಡಿನ ಮುಂದಿರುವ ಶ್ರೇಷ್ಠ ಪರಿಗಣನೆಯಾಗಬೇಕು. ಪೋಲೀಸರು ಶಿಫಾರಸು ಮಾಡಿದ ಸಂಬಂಧವಿಲ್ಲದ ಊಹಾ ಪೋಹಗಳ ಆಧಾರದ ಮೇಲೆ ಬೋರ್ಡ್ ಖೈದಿಯ ಅವಧಿಗೆ ಮುನ್ನ ಮಾಡುವ ಬಿಡುಗಡೆಯನ್ನು ವೃಥಾ ತಡೆಹಿಡಿಯುವಂತಿಲ್ಲ. ಖೈದಿಯು ಯಾವ ಸನ್ನಿವೇಶದಲ್ಲಿ ಅಪರಾಧ ನಡೆಸಿದ್ದಾನೆ ಹಾಗೂ ಆತನಿಗೆ ಮತ್ತೆ ಅಂತಹುದೇ ಅಪರಾಧವನ್ನು ನಡೆಸುವ ಪ್ರವೃತ್ತಿ ಇದೆಯೇ ಎಂಬುದನ್ನು ಬೋರ್ಡ್ ಪರಿಗಣಿಸುತ್ತದೆ.

6.4 ಖೈದಿಯೊಬ್ಬನ ಅವಧಿಗೆ ಮುನ್ನ ಮಾಡುವ ಬಿಡುಗಡೆಯ ಪ್ರಕರಣವು ಒಂದಕ್ಕಿಂತ ಹೆಚ್ಚಿನ ಸಂದರ್ಭಗಳಲ್ಲಿ ತಿರಸ್ಕೃತಗೊಂಡಿದ್ದಲ್ಲಿ ಬೋರ್ಡ್ ಆ ಮನವಿಯನ್ನು ಮತ್ತೆ ಪರಿಗಣಿಸಲು ಯಾವುದೇ ಅಡ್ಡಿಯಿರುವುದಿಲ್ಲ. ಈಗಾಗಲೇ ಪರಿಗಣಿಸಲ್ಪಟ್ಟಿದ್ದ ದೋಷಿಯೊಬ್ಬನ ಪ್ರಕರಣವು ತಿರಸ್ಕೃತಗೊಂಡಿದ್ದಲ್ಲಿ ಆತನ ಪ್ರಕರಣವನ್ನು ಪರಿಗಣಿಸಲಾಗಿದ್ದ ದಿನಾಂಕದಿಂದ ಒಂದು ವರ್ಷದ ಅವಧಿ ಮುಗಿದ ನಂತರ ಮತ್ತೆ ಹಾಗೆ ಮಾಡಬಹುದು.

6.5 ದಂಡನೆ ಪರಿಶೀಲನಾ ಮಂಡಲಿಯ ಶಿಫಾರಸುಗಳನ್ನು ಉನ್ನತ ಅಧಿಕಾರಿಗಳ ಪರಿಗಣನೆಗಾಗಿ ತಡಮಾಡದೆ ಮುಂದಿಡಬಹುದು. ದಂಡನೆ ಪರಿಶೀಲನಾ ಮಂಡಲಿಯ ಶಿಫಾರಸುಗಳನ್ನು ಉನ್ನತ ಅಧಿಕಾರಿಗಳು ಪರಿಗಣಿಸಬಹುದು ಅಥವಾ ಆಧಾರಗಳನ್ನು ಕೊಟ್ಟು ತಿರಸ್ಕರಿಸಲೂ ಬಹುದು. ಅಥವಾ ನಿರ್ದಿಷ್ಟ ಪ್ರಕರಣವೊಂದನ್ನು ಪುನಃ ಪರಿಗಣಿಸುವಂತೆ ದಂಡನೆ ಪರಿಶೀಲನಾ ಸಮಿತಿಗೆ ಸೂಚಿಸಬಹುದು. ತಜ್ಞರ ನಿಯೋಗದ ನಿರ್ಣಯಗಳನ್ನು ಸಂಬಂಧಪಟ್ಟ ಖೈದಿಗೆ ತಿಳಿಸತಕ್ಕದ್ದು. ಮಾತ್ರವಲ್ಲದೆ ಒಂದು ವೇಳೆ ತಜ್ಞರ ನಿಯೋಗವು ಕ್ಷಮಾದಾನ ಹಾಗೂ ಅವಧಿಗೆ ಮುನ್ನ ಬಿಡುಗಡೆಯ ಆಜ್ಞೆ ನೀಡಬಹುದಾದ ಖೈದಿಯ ಪ್ರಕರಣವಾಗಿದ್ದಲ್ಲಿ ಅಂತಹ ಖೈದಿಯು ಷರತ್ತಿನ ಮೇರೆಗೆ ಅಥವಾ ಷರತ್ತುಗಳಿಲ್ಲದೆ ಬಿಡುಗಡೆಗೊಳ್ಳಬಹುದು.

### 7. ರಾಷ್ಟ್ರೀಯ ಮಾನ ಹಕ್ಕುಗಳ ಆಯೋಗದ ಬಂಧನದಲ್ಲಿ ನ್ಯಾಯ ಕಾನೂನು ಕಾರ್ಯಕ್ರಮದ ಸಂಯೋಜಕರ ಕಛೇರಿಯ ಮೂಲಕ ಪ್ರಕರಣಗಳ ಮೇಲ್ವಿಚಾರಣೆ

ದೇಶದ ಕಾರಾಗೃಹಗಳಲ್ಲಿ ಕಾರಾಗೃಹ ವಾಸದ ಶಿಕ್ಷೆ ಅನುಭವಿಸುತ್ತಿರುವ ಎಲ್ಲ ಖೈದಿಗಳ ಪ್ರಕರಣಗಳ ಕಂಪ್ಯೂಟರೀಕೃತ ದಾಖಲೆಗಳ ಅನುಸರಣೆ ಮಾಡುವುದು ಅಪೇಕ್ಷಣೀಯವಾಗಿದ್ದರೂ ಪ್ರಸ್ತುತ ಅದನ್ನು ಮಾಡುವುದು ಅಶಕ್ಯವೆಂದು ತೋರುತ್ತದೆ. ಅಗತ್ಯ ವ್ಯವಸ್ಥೆಗಳು ಹಾಗೂ ನೌಕರ ವರ್ಗದ ನೇಮಕಾತಿಯಂತಹ ಬೆಂಬಲದಿಂದ ಮಾತ್ರ ಅಂತಹ ಮೇಲ್ವಿಚಾರಣೆ ಸಾಧ್ಯವಾಗುತ್ತದೆ.

# ವಿಚಾರಣಾಧೀನ ಖೈದಿಗಳನ್ನು ಕುರಿತು ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳಿಗೆ ಬರೆಯಲಾಗಿರುವ ಪತ್ರ

ಡಾ. ಜಸ್ಟಿಸ್ ಕೆ. ರಾಮ ಸ್ವಾಮಿ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ
ಸದಸ್ಯರು

ಡಿಸೆಂಬರ್ 22, 1999

ಆತ್ಮೀಯ ಸಹೋದರರಾದ ಮುಖ್ಯ ನ್ಯಾಯ ಮೂರ್ತಿಗಳಿಗೆ,

ಶೀಘ್ರ ನ್ಯಾಯ ವಿಚಾರಣೆಯು ಸಂವಿಧಾನದ ಪರಿಚ್ಛೇದ 21ರಲ್ಲಿ ಭರವಸೆ ನೀಡಲಾಗಿರುವ ನಿಷ್ಪಕ್ಷಪಾತವಾದ ಕ್ರಮಗಳ ಒಂದು ಭಾಗವಾಗಿದೆ. ಶೀಘ್ರ ನ್ಯಾಯ ವಿಚಾರಣೆಯು ವೈಯಕ್ತಿಕ ಸ್ವಾತಂತ್ರ್ಯದ ಒಂದು ಅಂಶವಾಗಿದೆ ಎಂದು ಕರ್ತಾರ್ ಸಿಂಗ್ ಪ್ರಕರಣ (ಟಾಡಾ ಕಾನೂನು ಪ್ರಕರಣದ ಸಂವಿಧಾನಾತ್ಮಕತೆ),ಜೆ. ಟಿ.1992 (2) ಎಸ್‌ಸಿ423,ರಲ್ಲಿ ಸರ್ವೋಚ್ಚ ನ್ಯಾಯಾಲಯ ಹೇಳಿದೆ. 1979ರಲ್ಲಿ ನಡೆದ ಹುಸೈನ್ ಆರಾ ಅವರ ಆರು ಪ್ರಕರಣಗಳಲ್ಲಿ ಆದಂತೆ ನ್ಯಾಯ ವಿಚಾರಣೆಯು ತ್ವರಿತಗತಿಯಲ್ಲಿ ನಡೆಯದಿದ್ದರೆ ಪರಿಚ್ಛೇದ 21ನ್ನು ಉಲ್ಲಂಘಿಸುವುದರ ಮೂಲಕ ವ್ಯಾವಹಾರಿಕ ಕಾನೂನು ನಿರರ್ಥಕವಾಗುತ್ತದೆ. ಅಂತುಳೆಯ ಪ್ರಕರಣ1992 (1) ಎಸ್‌ಸಿ 215ರಲ್ಲಿ ನ್ಯಾಯ ವಿಚಾರಣೆಯು 7 ವರ್ಷಗಳ ಅವಧಿಯ ದಂಡನೆಯನ್ನು ಹೊಂದುವುದಕ್ಕೆ ತಕ್ಕ ಅಪರಾಧ ಪ್ರಕರಣಗಳಿಗೆ ಸಂಬಂಧಿಸಿದಂತೆ 2ವರ್ಷಗಳೊಳಗಾಗಿ ಮತ್ತು 7 ವರ್ಷಗಳಿಗೂ ಮೀರಿದ ಅವಧಿಯ ದಂಡನೆಯನ್ನು ಹೊಂದುವುದಕ್ಕೆ ತಕ್ಕ ಅಪರಾಧ ಪ್ರಕರಣಗಳ ಸಂಬಂಧದಲ್ಲಿ 3 ವರ್ಷಗಳೊಳಗಾಗಿ ಸಂಪೂರ್ಣಗೊಳಿಸಬೇಕೆಂದು ಸಂವಿಧಾನ ಪೀಠವೊಂದು ನಿರ್ದೇಶಿಸಿದೆ. ಅಂತಿಮ ಗಡುವು ಮುಗಿಯುವುದರೊಳಗಾಗಿ ಪ್ರಾಸಿಕ್ಯೂಷನ್ ಸಾಕ್ಷಿ ಪುರಾವೆಗಳನ್ನು ಹಾಜರು ಪಡಿಸಲು ತಪ್ಪಿದಲ್ಲಿ ಕಾನೂನುಕ್ರಮ ಜರುಗಿಸಬೇಕಾಗಿದ್ದ ಈ ಕ್ರಮವನ್ನು ಕೊನೆಗೊಳಿಸಿ ಅಲ್ಲಿಗೆ ಕೈಬಿಡಲಾಗುತ್ತದೆ, ನ್ಯಾಯಾಲಯ ಅದನ್ನು ನ್ಯಾಯವಿಚಾರಣೆಯ ಮುಂದಿನ ಹಂತಕ್ಕೆ ಮುಂದುವರೆಸುತ್ತದೆ. ಈ ನಿಲುವು ರಾಜ್‌ದೇವ್ ಶರ್ಮಾII ಮತ್ತು ಬಿಹಾರ ನಡುವಿನ ಪ್ರಕರಣ 1999 (7) ಎಸ್‌ಸಿ 604 ಕ್ಕೆ ಸಂಬಂಧಿಸಿದಂತೆ ಸರ್ವೋಚ್ಚ ನ್ಯಾಯಾಲಯದ ತ್ರಿ ಸದಸ್ಯ ನ್ಯಾಯ ಪೀಠವೊಂದು ಇತ್ತೀಚೆಗೆ ನೀಡಿದ ತೀರ್ಪಿನಲ್ಲಿ ಬಹುಮತದಿಂದ ವ್ಯಕ್ತಪಡಿಸಿದೆ.

ಕಾಮನ್ ಕಾಸ್ ಪ್ರಕರಣ, 1996 (2) ಎಸ್‌ಸಿ 775 ರಲ್ಲಿ - ಡಿ. ಓ. ಶರ್ಮಾ Iಪ್ರಕರಣದಲ್ಲಿ ಕೆಲಸದ ಒತ್ತಡದಿಂದಾಗಿ ತಮ್ಮ ದೈನಂದಿನ ನ್ಯಾಯ ವಿಚಾರಣೆಯನ್ನು ನಡೆಸಲು ಸಾಧ್ಯವಾಗದಿರುವುದರಿಂದ ನ್ಯಾಯಾಲಯಗಳು ಸಮಯ ತೆಗೆದುಕೊಂಡಿದ್ದು, ಈ ಮೇಲಿನ ಪ್ರಕರಣಗಳನ್ನು ನ್ಯಾಯ ವಿಚಾರಣೆಗಾಗಿ ಹೇರಲಾಗಿದ್ದ, ಕ್ರಮವಾಗಿ, ಎರಡು ಮತ್ತು ಮೂರು ವರ್ಷಗಳ ಗಡುವಿನಿಂದ ಹೊರತುಪಡಿಸಲಾಗಿದೆ. ಇತ್ತೀಚಿಗಿನ ರಾಜ್ ದೇವ್ ಶರ್ಮಾನ ಪ್ರಕರಣದಲ್ಲಿ, 1999 (7) ಎಸ್‌ಸಿ 604 ಈ ಮೇಲಿನ ಬಹುಮತವೇ ಮತ್ತೆ ವ್ಯಕ್ತವಾಗಿದೆ.

ಕಾಮನ್ ಕಾಸ್ ಪ್ರಕರಣ, 1996 (4) ಎಸ್‌ಸಿ 33ರಲ್ಲಿ ಸರ್ವೋಚ್ಚ ನ್ಯಾಯಾಲಯ ಇಲ್ಲಿ ಸೂಚಿಸಲಾಗಿರುವ ನಿರ್ದಿಷ್ಟವಾದ ಕೆಲವು ನಿರ್ಬಂಧಗಳ ಅನುಸಾರ ವಿಚಾರಣಾಧೀನ ಖೈದಿಗಳನ್ನು ಬಿಡುಗಡೆಗೊಳಿಸಲು ಆದೇಶಿಸಿದೆ. ಕಾಮನ್ ಕಾಸ್ ಪ್ರಕರಣದಲ್ಲಿ ರೂಪಿಸಲಾಗಿರುವ ನಿಯಮಗಳು

ಸ್ವಯಂ ಕಾರ್ಯರೂಪಕ್ಕೆ ಬರುವಂಥವುಗಳಲ್ಲ. ಮುಂದಿನ ವಿಚಾರಣೆಗೆ ಆಸ್ಪದವಾಗುವಂತೆ ನಿಗದಿತ ಅವಧಿಯವರೆಗೆ ಮತ್ತೆ ಬಂಧನದಲ್ಲಿರಿಸುವ ವಿಚಾರಣಾಧೀನ ಖೈದಿಗಳನ್ನು ಕೆಳಗಿನ ಹಂತದ ಅಪರಾಧ ನ್ಯಾಯ ವ್ಯವಸ್ಥೆಯನ್ನು ಜರುಗಿಸುವ ಮುಖ್ಯಾಧಿಕಾರಿಗಳಾದ ತಜ್ಞ ಮ್ಯಾಜಿಸ್ಟ್ರೇಟರ ಮುಂದೆ ಹಾಜರುಪಡಿಸಬೇಕಾಗಿದ್ದು, ಮೇಲ್ವಿಚಾರಣೆ, ಮಾರ್ಗದರ್ಶನ ಹಾಗೂ ನಿರ್ದೇಶನಗಳು ಅಗತ್ಯವಾಗಿರುತ್ತವೆ. ಸಮಾಜದ ಬಡ, ಅಮನಾನುಕೂಲಕರ ಪರಿಸ್ಥಿತಿಯಲ್ಲಿರುವ ಹಾಗೂ ಅಲಕ್ಷ್ಯಕ್ಕೀಡಾದ ವರ್ಗಗಳ ಜನರಿಗೆ ಬಿಡುಗಡೆಗಾಗಿ ಒಪ್ಪಂದ ಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ - ಹಾಗೂ ಜಾಮೀನಿಗಾಗಿ ಮನವಿ ಮಾಡಿಕೊಂಡು ನ್ಯಾಯಾಲಯದಿಂದ ಅದನ್ನು ಪಡೆಯಬಹುದಾದ ಜ್ಯುಡಿಷಿಯಲ್ ಪರಿಹಾರದ ಅವಕಾಶವನ್ನು ಬಳಸಿಕೊಳ್ಳುವುದರ ಅರಿವು ಕೂಡ ಇರುವುದಿಲ್ಲ. ಅಗತ್ಯವಿಲ್ಲದ ಸೆರೆವಾಸ ಅಥವಾ ಸೆರೆವಾಸವನ್ನವಲಂಬಿಸುವುದರಿಂದ ಪ್ರತಿಯೊಬ್ಬ ನಾಗರಿಕನಿಗೆ ಕೊಡಮಾಡಿರುವ ಹಕ್ಕನ್ನು ಉಲ್ಲಂಘಿಸಿದಂತಾಗುತ್ತದೆ ಮಾತ್ರವಲ್ಲದೆ, ರಕ್ಷಣೆಯ, ಕಾನೂನು ಮತ್ತು ಅಪರಾಧ ನ್ಯಾಯ ವ್ಯವಸ್ಥೆಯ ಗಂಭೀರ ಲಕ್ಷ್ಯದ ಅವಶ್ಯಕತೆಯಿರುವ, ಘಾಸಿಗೆ ಸುಲಭವಾಗಿ ತುತ್ತಾಗುವಂಥ ಸಾಮಾಜಿಕ ವಿಭಾಗಕ್ಕೆ ಸೇರಿರುವಂಥವರ ಸ್ವಾತಂತ್ರ್ಯ ಹಾಗೂ ಚಲನೆಯ ಸ್ವಾತಂತ್ರ್ಯ ಹಾಗೂ ಮಾನವ ಹಕ್ಕುಗಳ ತೀವ್ರ ನಿರಾಕರಣೆ ಮಾಡಿದಂತಾಗುತ್ತದೆ.

ಈ ಹಿನ್ನೆಲೆಯಲ್ಲಿ, ಮೇಲೆ ಹೇಳಲಾಗಿರುವ ದೃಷ್ಟಿಕೋನಗಳನ್ನು ಪರಿಗಣಿಸಲು ಹಾಗೂ 'ಕಾಮನ್ ಕಾಸ್' ಪ್ರಕರಣಗಳಲ್ಲಿ ಹೇಳಲಾಗಿರುವ ಕಾನೂನನ್ನು ಅನುಸರಣೆ ಮಾಡಲು ಹಾಗೂ ಜಾರಿಗೊಳಿಸಲು ಎಲ್ಲ ಮ್ಯಾಜಿಸ್ಟ್ರೇಟರುಗಳಿಗೆ ಸೂಕ್ತವಾದ ಆದೇಶಗಳನ್ನು ನಿಡಬೇಕಾಗಿ ತಮ್ಮನ್ನು ಕೋರುತ್ತೇವೆ. ಸಾಮಾನ್ಯ ವಿಧಿಗಳನ್ನು ಮಾರ್ಗ ಸೂಚಿಯೆಂದು ಪರಿಗಣಿಸಲಾಗಿದ್ದು, ಅದನ್ನು ತಮ್ಮ ತತ್‌ಕ್ಷಣದ ಪರಾಮರ್ಶೆಗಾಗಿ ಇದರೊಂದಿಗೆ ಲಗತ್ತಿಸಲಾಗಿದೆ. ಆಂಧ್ರ ಪ್ರದೇಶದ ಉಚ್ಚ ನ್ಯಾಯಾಲಯದ ಗೌರವಾನ್ವಿತ ಮುಖ್ಯ ನ್ಯಾಯಮೂರ್ತಿಗಳೊಂದಿಗೆ ನಾನು ಈ ಕುರಿತು ಚರ್ಚೆ ಮಾಡಿದ್ದೇನೆ. ಅವರು ಅದಕ್ಕೆ ಸಂಬಂಧಿಸಿದಂತೆ ತಮ್ಮ ಸಹ ನ್ಯಾಯಾಧೀಶರುಗಳನ್ನು ಸಂಪರ್ಕಿಸಿ, ಅವರೊಂದಿಗೆ ಸಮಾಲೋಚಿಸಿ, ಅವಕಾಶ ವಂಚಿತ ಹಾಗೂ ಬಡ ವಿಚಾರಣಾಧೀನ ಖೈದಿಗಳ ಸ್ವಾತಂತ್ರ್ಯವನ್ನು ಅನಗತ್ಯವಾಗಿ ನಿರ್ಬಂಧಿಸುವುದನ್ನು ತಡೆಗಟ್ಟುವ ವಿಚಾರವನ್ನು ಸಹೃದಯತೆಯಿಂದ ಪರಿಶೀಲಿಸಿ ಅಗತ್ಯ ನಿರ್ದೇಶನಗಳನ್ನು ಜಾರಿಗೊಳಿಸಿದ್ದಾರೆ. ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಬರುವ ಎಲ್ಲ ಮ್ಯಾಜಿಸ್ಟ್ರೇಟರುಗಳು ಹಾಗೂ ಸೆಷನ್ಸ್ ನ್ಯಾಯಾಧೀಶರುಗಳು ಜಾರಿಗೊಳಿಸಲಾಗಿರುವ ಈ ಅಗತ್ಯ ನಿರ್ದೇಶನಗಳನ್ನು ಅಂಗೀಕರಿಸಿ, ಅನುಸರಣೆ ಮಾಡುವಂತೆ ಹಾಗೂ ಆ ಮೂಲಕ ಬಡ ವಿಚಾರಣಾಧೀನ ಖೈದಿಗಳ ಸ್ವಾತಂತ್ರ್ಯ ಮತ್ತು ಚಲನೆಯ ಸ್ವಾತಂತ್ರ ಕಾಯ್ದುಕೊಳ್ಳಲ್ಪಡುವ ಹಾಗೆ ತಾವು ಅದನ್ನು ಪರಿಗಣಿಸಿ ಅಂಗೀಕರಿಸಬೇಕೆಂದು ಕೋರುತ್ತೇನೆ.

ಕೃತಜ್ಞತೆಗಳೊಂದಿಗೆ,

ತಮ್ಮ ವಿಶ್ವಾಸಿ,

ಸಹಿ/-

**(ಡಾ. ಜಸ್ಟಿಸ್ ಕೆ. ರಾಮ ಸ್ವಾಮಿ)**

ರವರಿಗೆ,

ಎಲ್ಲ ಉಚ್ಚ ನ್ಯಾಯಾಲಯಗಳ ಮುಖ್ಯ ನ್ಯಾಯಮೂರ್ತಿಗಳು.

# ಎಲ್ಲಾ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರುಗಳಿಗೆ ಆಂಧ್ರ ಪ್ರದೇಶ ಉಚ್ಛ ನ್ಯಾಯಾಲಯ ಹೊರಡಿಸಿರುವ ಮನವಿಯ ಕರಡು

ಕಾರಾಗೃಹಗಳಲ್ಲಿ ದೀರ್ಘ ಕಾಲದಿಂದ ಬಳಲುತ್ತಿರುವ ವಿಚಾರಣಾಧೀನ ಖೈದಿಗಳ ಬಿಡುಗಡೆಗೆ ಸಂಬಂಧಿಸಿ 1986ರ ರಿಟ್ ಅರ್ಜಿ ಸಂ.1128ರಲ್ಲಿ (ಕಾಮನ್ ಕಾಸ್ Vs.ಯೂನಿಯನ್ ಆಫ್ ಇಂಡಿಯಾ ಮತ್ತು ಇತರ) 1986 ಮೇ 1ರಂದು ಸರ್ವೋಚ್ಛ ನ್ಯಾಯಾಲಯ ಹೊರಡಿಸಿದ ಆದೇಶಗಳನ್ನು ಆಂಧ್ರ ಪ್ರದೇಶದ ಎಲ್ಲಾ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರುಗಳು ಅರಿತಿದ್ದಾರೆ.

ಸರ್ವೋಚ್ಛ ನ್ಯಾಯಾಲಯದ ಆದೇಶಗಳನ್ನು ತತ್‌ಕ್ಷಣದ ಪರಾಮರ್ಶೆಗಾಗಿ ಇಲ್ಲಿ ಮತ್ತೆ ಕೊಡಲಾಗಿದೆ.

"(ಎ) ಆಪಾದಿತರು ಭಾರತೀಯ ದಂಡ ಸಂಹಿತೆ ಅಥವಾ ಜಾರಿಯಲ್ಲಿರುವ ಇನ್ನಿತರ ಕಾಯ್ದೆಯಡಿಯಲ್ಲಿ 3 ವರ್ಷ ಸಜೆ ಮತ್ತು ದಂಡ (ಅಥವಾ ದಂಡವಿಲ್ಲದೆ )ವಿಧಿಸಲ್ಪಡುವಂತಹ ಅಥವಾ ಅಪರಾಧಗಳನ್ನು ಮಾಡಿದ್ದು, ಒಂದು ವರ್ಷಕ್ಕಿಂತ ಹೆಚ್ಚು ವಿಚಾರಣೆ ನಡೆಸದೆ ಆಪಾದಿತರನ್ನು ಜಾಮೀನಿನಲ್ಲಿ ಬಿಡುಗಡೆ ಮಾಡದೆ 6 ತಿಂಗಳುಗಳಿಗಿಂತ ಹೆಚ್ಚುಕಾಲ ಕಾರಾಗೃಹದಲ್ಲಿ ಇರಿಸಿಕೊಂಡಿದ್ದಲ್ಲಿ, ಕ್ರಿಮಿನಲ್ ನ್ಯಾಯಾಲಯ ಆಪಾದಿತರನ್ನು ಜಾಮೀನು ಅಥವಾ ವೈಯಕ್ತಿಕ ಒಪ್ಪಂದದ ಮೇರೆಗೆ (ಷರತ್ತುಗಳ ಮೇಲೆ) ಅಪರಾದ ದಂಡ ಸಂಹಿತೆಯ 437ನೇ ಪರಿಚ್ಛೇದದ ಪ್ರಕಾರ ಬಿಡುಗಡೆ ಮಾಡತಕ್ಕದ್ದು.

(ಬಿ) ಆಪಾದಿತರು ಭಾರತೀಯ ದಂಡ ಸಂಹಿತೆ ಅಥವಾ ಜಾರಿಯಲ್ಲಿರುವ ಇನ್ನಿತರ ಕಾಯ್ದೆಯಡಿಯಲ್ಲಿ 5 ವರ್ಷ ಸಜೆ ಮತ್ತು ದಂಡ (ಅಥವಾ ದಂಡವಿಲ್ಲದೆ) ವಿಧಿಸಲ್ಪಡುವಂತಹ ಅಥವಾ ಅಪರಾಧಗಳನ್ನು ಮಾಡಿದ್ದು, ಒಂದು ವರ್ಷಕ್ಕಿಂತ ಹೆಚ್ಚು ವಿಚಾರಣೆ ನಡೆಸದೆ ಆಪಾದಿತರನ್ನು ಜಾಮೀನಿನಲ್ಲಿ ಬಿಡುಗಡೆ ಮಾಡದೆ 6 ತಿಂಗಳುಗಳಿಗಿಂತ ಹೆಚ್ಚುಕಾಲ ಕಾರಾಗೃಹದಲ್ಲಿ ಇರಿಸಿಕೊಂಡಿದ್ದಲ್ಲಿ, ಕ್ರಿಮಿನಲ್ ನ್ಯಾಯಾಲಯ ಆಪಾದಿತರನ್ನು ಜಾಮೀನು ಅಥವಾ ವೈಯಕ್ತಿಕ ಒಪ್ಪಂದದ ಮೇರೆಗೆ (ಷರತ್ತುಗಳ ಮೇಲೆ) ಅಪರಾದ ದಂಡ ಸಂಹಿತೆಯ 437ನೇ ಪರಿಚ್ಛೇದದ ಪ್ರಕಾರ ಬಿಡುಗಡೆ ಮಾಡತಕ್ಕದ್ದು.

(ಸಿ) ಆಪಾದಿತರು ಭಾರತೀಯ ದಂಡ ಸಂಹಿತೆ ಅಥವಾ ಜಾರಿಯಲ್ಲಿರುವ ಇನ್ನಿತರ ಕಾಯ್ದೆಯಡಿಯಲ್ಲಿ 7 ವರ್ಷ ಸಜೆ ಮತ್ತು ದಂಡ (ಅಥವಾ ದಂಡವಿಲ್ಲದೆ) ವಿಧಿಸಲ್ಪಡುವಂತಹ ಅಥವಾ ಅಪರಾಧಗಳನ್ನು ಮಾಡಿದ್ದು, ಒಂದು ವರ್ಷಕ್ಕಿಂತ ಹೆಚ್ಚು ವಿಚಾರಣೆ ನಡೆಸದೆ ಆಪಾದಿತರನ್ನು ಜಾಮೀನಿನಲ್ಲಿ ಬಿಡುಗಡೆ ಮಾಡದೆ 6 ತಿಂಗಳುಗಳಿಗಿಂತ ಹೆಚ್ಚುಕಾಲ ಕಾರಾಗೃಹದಲ್ಲಿ ಇರಿಸಿಕೊಂಡಿದ್ದಲ್ಲಿ, ಕ್ರಿಮಿನಲ್ ನ್ಯಾಯಾಲಯ ಆಪಾದಿತರನ್ನು ಜಾಮೀನು ಅಥವಾ ವೈಯಕ್ತಿಕ ಒಪ್ಪಂದದ ಮೇರೆಗೆ (ಷರತ್ತುಗಳ ಮೇಲೆ) ಅಪರಾದ ದಂಡ ಸಂಹಿತೆಯ 437ನೇ ಪರಿಚ್ಛೇದದ ಪ್ರಕಾರ ಬಿಡುಗಡೆ ಮಾಡತಕ್ಕದ್ದು.

ಆಂಧ್ರ ಪ್ರದೇಶದ ವಿವಿಧ ನ್ಯಾಯಾಲಯಗಳು ಸರ್ವೋಚ್ಚ ನ್ಯಾಯಾಲಯ ಹೇಳಿರುವ ಈ ಮೇಲಿನ ಮೂರು ವಿಚಾರಗಳ ವ್ಯಾಪ್ತಿಯಲ್ಲಿ ತಮ್ಮ ವಿಚಾರಣಾಧೀನ ಖೈದಿಗಳು ಒಳಪಡುತ್ತಾರೆಯೇ ಎಂಬುದನ್ನು ಕೂಡ ಪರಿಶೀಲಿಸದೆ ಎಂದಿನಂತೆ ಅವರ ವಿಚಾರಣಾಧೀನ ಕಾರಾಗೃಹ ವಾಸವನ್ನು ವೃಥಾ ಎಳೆಯುತ್ತಿದ್ದಾರೆ.

ಆಂಧ್ರ ಪ್ರದೇಶ ಸರ್ಕಾರದ, ಗೃಹ ಇಲಾಖೆಯ (ಕಾರಾಗೃಹಗಳು. 13) ಸರ್ಕಾರಿ ಆದೇಶ Ms. 356 ದಿನಾಂಕ 14.7.1980 ಮತ್ತು ಉಚ್ಚ ನ್ಯಾಯಾಲಯದ ಸಮ್ಮತಿಯೊಂದಿಗೆ ರಚಿಸಲ್ಪಟ್ಟಿರುವ ವಿಚಾರಣಾಧೀನ ಖೈದಿಗಳ ವಿಚಾರದಲ್ಲಿ ಜಿಲ್ಲಾ ಮಟ್ಟದ ಪರಿಶೀಲನಾ ಸಮಿತಿಯು ಯಾವ ಜಿಲ್ಲೆಯಲ್ಲೂ ನಿಗದಿತ ಅವಧಿಗೆ ಸರಿಯಾಗಿ ಸಭೆ ಸೇರುತ್ತಿಲ್ಲವೆಂಬುದನ್ನು ಕೂಡ ಗಮನಿಸಲಾಗಿದೆ. ಒಂದು ವೇಳೆ ಆ ಸಭೆಯೇನಾದರೂ ಸೇರಿದ್ದರೂ ಕೂಡ ಸರ್ವೋಚ್ಚ ನ್ಯಾಯಾಲಯ ಹೇಳಿರುವ ಈ ಮೂರು ಗುಂಪುಗಳಡಿಯಲ್ಲಿ ಸದರಿ ಪ್ರಕರಣಗಳು ಬರುತ್ತವೆಯೇ ಎಂದೇನೂ ಪರಿಶೀಲಿಸಲು ಹೋಗುವುದಿಲ್ಲ.

ಭಾರತದ ಸರ್ವೋಚ್ಚ ನ್ಯಾಯಾಲಯದ ನಿರ್ದೇಶನಗಳ ಜಾಗರೂಕ ಅನುಸರಣೆ ನಡೆದಿದೆಯೇ ಎಂಬುದನ್ನು ಗಮನಿಸಲು, ವಿಚಾರಣಾಧೀನ ಖೈದಿಗಳು ಬಹು ಕಾಲದವರೆಗೆ ವೃಥಾ ಜೈಲುಗಳಲ್ಲಿ ಕೊಳೆಯುವಂತಾಗದಿರಲು ಈ ಕೆಳಗಿನ ಸೂಚನೆಗಳನ್ನು ತತ್ಕ್ಷಣ ಅನುಷ್ಠಾನಗೊಳಿಸುವಂತೆ ಜಾರಿ ಮಾಡಬೇಕು:

1. ಎಲ್ಲಾ ನ್ಯಾಯಾಲಯಗಳು, ಮೊದಲನೇ ದರ್ಜೆಯ ಜುಡಿಷಿಯಲ್ ಮ್ಯಾಜಿಸ್ಟ್ರೇಟರೇ ಆಗಿರಲಿ, ಅಥವಾ ನ್ಯಾಯಾಲಯಗಳೇ ಆಗಿರಲಿ, ಯಾವುದೇ ಖೈದಿಯ ವಿಚಾರಣಾಧೀನ ಸೆರೆವಾಸದ ಅವಧಿಯನ್ನು ಮುಂದುವರೆಸುವ ಮುನ್ನ ಈಗಾಗಲೇ ಅನುಭವಿಸಿರುವ ಸೆರೆವಾಸದ ಅವಧಿಯನ್ನು ಖಚಿತಪಡಿಸಬೇಕು ಮತ್ತು ಆತನನ್ನು ಜಾಮೀನಿನ ಮೇಲೆ ಬಿಡಬಹುದಾಗಿತ್ತೇ/ಜಾಮೀನು/ಭದ್ರತೆ ಒದಗಿಸುವುದು ಆತನಿಂದ ಸಾಧ್ಯವಾಗಲಿಲ್ಲವೇ ಎಂಬ ವಿಚಾರಗಳನ್ನು ಪರಿಶೀಲಿಸಬೇಕು. ವಿಚಾರಣೆಯ ದಿನ ಹಾಜರಾಗುವಂತೆ ವೈಯಕ್ತಿಕ ಕರಾರಿನ ಮೇರೆಗೆ ಅಂತಹವರನ್ನು ಬಿಡುಗಡೆಗೊಳಿಸಬಹುದು.

2. ವಿಚಾರಣಾಧೀನ ಖೈದಿಗಳಿಗಾಗಿ ಇರುವ ಜಿಲ್ಲಾ ಮಟ್ಟದ ಪರಿಶೀಲನಾ ಸಮಿತಿಗಳು ಕೊನೇಕ ಪಕ್ಷ ಮೂರು ತಿಂಗಳುಗಳಿಗೊಮ್ಮೆ ಸಭೆ ಸೇರಿ 6 ತಿಂಗಳಿಗೂ ಹೆಚ್ಚುಕಾಲ ನ್ಯಾಯಾಂಗ ಬಂಧನದಲ್ಲಿರುವ ಖೈದಿಗಳ ಪ್ರಕರಣಗಳನ್ನು ಪರಿಶೀಲಿಸಬೇಕು. ಈ ಸಭೆಗಳನ್ನು ಪ್ರಮುಖ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ತಪ್ಪದೆ ನಡೆಸಿಕೊಡಬೇಕು.

3. ಸರ್ವೋಚ್ಚ ನ್ಯಾಯಾಲಯ ಸೂಚಿಸಿರುವ 3 ಗುಂಪುಗಳಲ್ಲಿ ಯಾವುದಾದರೊಂದಕ್ಕೆ ಪ್ರಕರಣವೊಂದು ಅನ್ವಯಿಸಿದಲ್ಲಿ ವಿಚಾರಣಾಧೀನ ಖೈದಿಯ ಸೆರೆವಾಸದ ಅವಧಿಯನ್ನು ವಿಸ್ತರಿಸುವಾಗಲಾಗಲೀ ಅಥವಾ ಜಿಲ್ಲಾ ಮಟ್ಟದ ಪರಿಶೀಲನಾ ಸಮಿತಿಯ ಸಭೆ ನಡೆಯುವಾಗಲಾಗಲೀ ಸಂಬಂಧಪಟ್ಟ ನ್ಯಾಯಾಲಯವು "ಅಪರಾಧಿಯನ್ನು ಜಾಮೀನಿನ ಮೇಲೆ ಅಥವಾ ವೈಯಕ್ತಿಕ ಕರಾರಿನ ಮೇಲೆ ಅಥವಾ ಅಗತ್ಯವೆಂದು ಕಂಡು ಬಂದ ಇತರ ಷರತ್ತಿನ ಮೇಲೆ ಅಪರಾಧ ದಂಡ ಸಂಹಿತೆ ಪರಿಚ್ಛೇದ 437ರ ಪ್ರಕಾರ ಬಿಡುಗಡೆಗೊಳಿಸಬಹುದು.

ಶಂಕರ್ ಸೇನ್
ವಿಶೇಷ ವರದಿಗಾರರು

ಡಿ.ಒ.ಸಂ. 11/1/99-ಪಿಆರ್‌ಪಿ ಮತ್ತು ಪಿ
ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ

29.04.1999

ಆತ್ಮೀಯರಾದ

ವಿಚಾರಣಾಧೀನ ಖೈದಿಗಳ ಸಮಸ್ಯೆಗಳು ಇಂದು ತೀವ್ರ ಸ್ವರೂಪದ ಆಯಾಮವನ್ನು ಪಡೆದುಕೊಂಡಿದೆ. ಭಾರತದ ಕಾರಾಗೃಹಗಳಲ್ಲಿರುವ 80%ರಷ್ಟು ಮಂದಿ ವಿಚಾರಣಾಧೀನ ಖೈದಿಗಳಾಗಿದ್ದಾರೆ. ಬಹುತೇಕ ವಿಚಾರಣಾಧೀನ ಖೈದಿಗಳು ಗ್ರಾಮಾಂತರ ಪ್ರದೇಶಗಳಲ್ಲಿ ವ್ಯವಸಾಯ ಮಾಡಿಕೊಂಡು ಬದುಕುತ್ತಿದ್ದ ಬಡ, ಅವಕಾಶ ವಂಚಿತ ವರ್ಗಕ್ಕೆ ಸೇರಿದವರು. 'ಕಾಮನ್ ಕಾಸ್' (ಒಂದು ನೋಂದಾಯಿತ ಸಂಸ್ಥೆ) ಮತ್ತು ಯೂನಿಯನ್ ಆಫ್ ಇಂಡಿಯಾ (1996) ಪ್ರಕರಣದಲ್ಲಿ ವಿಚಾರಣಾಧೀನ ಖೈದಿಗಳನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡುವುದರ ಕುರಿತು ಸರ್ವೋಚ್ಚ ನ್ಯಾಯಾಲಯ ಈ ಕೆಳಕಂಡಂತೆ ಆದೇಶ ನೀಡಿದೆ.

(ಎ) ಮೂರು ವರ್ಷಗಳ ಕಾರಾಗೃಹ ವಾಸದ ಶಿಕ್ಷೆಗೆ ಅರ್ಹವಾಗುವಂತಹ ಅಪರಾಧ ಮಾಡಿದ್ದು, 6 ತಿಂಗಳು ಅಥವಾ ಅದಕ್ಕೂ ಹೆಚ್ಚು ಕಾಲ ಕಾರಾಗೃಹದಲ್ಲಿದ್ದು, ಒಂದು ವರ್ಷವಾದರೂ ಅವರ ನ್ಯಾಯವಿಚಾರಣೆಯನ್ನು ನಡೆಸದಿದ್ದಲ್ಲಿ, ಅಂತಹ ವಿಚಾರಣಾಧೀನ ಖೈದಿಗಳನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಬೇಕು.

(ಬಿ) 5 ವರ್ಷಗಳ ಕಾರಾಗೃಹ ವಾಸದ ಶಿಕ್ಷೆಗೆ ಅರ್ಹವಾಗುವಂತಹ ಅಪರಾಧಕ್ಕೆ ಕಳೆದ 6 ತಿಂಗಳುಗಳಿಂದ ಅಥವಾ ಅದಕ್ಕಿಂತ ಹೆಚ್ಚು ಸಮಯ ಕಾರಾಗೃಹದಲ್ಲಿದ್ದು, ಎರಡು ವರ್ಷಗಳಾದರೂ ಅವರ ನ್ಯಾಯವಿಚಾರಣೆಯನ್ನು ನಡೆಸದಿದ್ದಲ್ಲಿ, ಅಂತಹ ವಿಚಾರಣಾಧೀನ ಖೈದಿಗಳನ್ನು ಜಾಮೀನಿನ ಮೇಲೆ ಬಿಡುಗಡೆಗೊಳಿಸಬೇಕು.

(ಸಿ) 7 ವರ್ಷಗಳ ಅಥವಾ ಅದಕ್ಕಿಂತ ಕಡಿಮೆ ಅವಧಿಯ ಕಾರಾಗೃಹ ವಾಸದ ಶಿಕ್ಷೆಗೆ ಅರ್ಹವಾಗುವಂತಹ ಅಪರಾಧಕ್ಕೆ ಕಳೆದ ಒಂದು ವರ್ಷ ಅಥವಾ ಅದಕ್ಕೂ ಹೆಚ್ಚಿನ ಸಮಯ ಕಾರಾಗೃಹದಲ್ಲಿದ್ದು, ಎರಡು ವರ್ಷಗಳಾದರೂ ಅವರ ನ್ಯಾಯವಿಚಾರಣೆಯನ್ನು ನಡೆಸದಿದ್ದಲ್ಲಿ, ಅಂತಹ ವಿಚಾರಣಾಧೀನ ಖೈದಿಗಳನ್ನು ಜಾಮೀನಿನ ಮೇಲೆ ಬಿಡುಗಡೆಗೊಳಿಸಬೇಕು.

(ಡಿ) ಸಾರಿಗೆ ಅಪರಾಧಕ್ಕೆ ಸಂಬಂಧಿಸಿದ ಅಪರಾಧ ಕ್ರಮಗಳು 2 ವರ್ಷಗಳಿಗಿಂತ ಹೆಚ್ಚು ಕಾಲ ಇತ್ಯರ್ಥಗೊಳ್ಳದೆ ಉಳಿದಿದ್ದಲ್ಲಿ, ಆಪಾದಿತನನ್ನು ವಿಮುಕ್ತಗೊಳಿಸಬೇಕು.

(ಇ) ನ್ಯಾಯಾಲಯದ ಅನುಮತಿಯೊಂದಿಗೆ ಬಗೆಹರಿಸಬಹುದಾಗಿದ್ದ ಅಪರಾಧವಾಗಿದ್ದು, 2 ವರ್ಷಕ್ಕಿಂತ ಹೆಚ್ಚು ಕಾಲ ಇತ್ಯರ್ಥಗೊಳ್ಳದೆ ಉಳಿದಿದ್ದಲ್ಲಿ, ನ್ಯಾಯಾಲಯವು ಪಬ್ಲಿಕ್ ಪ್ರಾಸಿಕ್ಯೂಟರ್ ಅವರ ಹೇಳಿಕೆಯ ಮೇರೆಗೆ ಆಪಾದಿತನ್ನು ಬಿಡುಗಡೆಗೊಳಿಸಬೇಕು.

(ಎಫ್) ವಿಚಾರಣಾರ್ಹವಲ್ಲದ ಹಾಗೂ ಜಾಮೀನು ನೀಡಬಹುದಾದ ಅಪರಾಧವಾಗಿದ್ದು, (non-cognizable and bailablae offence) 2 ವರ್ಷಗಳಿಗೂ ಹೆಚ್ಚು ಕಾಲ ನ್ಯಾಯ ವಿಚಾರಣೆ ಪ್ರಾರಂಭಗೊಳ್ಳದೆ ಇದ್ದಲ್ಲಿ ನ್ಯಾಯಾಲಯವು ಅಂತಹ ಆಪಾದಿತರನ್ನು ಬಿಡುಗಡೆಗೊಳಿಸಬೇಕು.

(ಜಿ) ದಂಡ ಪಾವತಿಸುವಂತಹ ಅಪರಾಧ ಮಾತ್ರವಾಗಿದ್ದು, ಒಂದು ವರ್ಷದೊಳಗಾಗಿ ಒಂದು ವರ್ಷದೊಳಗಾಗಿ ನ್ಯಾಯ ವಿಚಾರಣೆ ಪ್ರಾರಂಭಗೊಳ್ಳದಿದ್ದಲ್ಲಿ ಆಪಾದಿತನನ್ನು ವಿಮುಕ್ತಗೊಳಿಸಬೇಕು.

(ಎಚ್) ಒಂದು ವರ್ಷ ಸಜೆಯಾಗುವಂತಹ ಅಪರಾಧ ಮಾಡಿದ್ದು ಒಂದು ವರ್ಷದೊಳಗಾಗಿ ನ್ಯಾಯ ವಿಚಾರಣೆಪ್ರಾರಂಭಗೊಳ್ಳದಿದ್ದಲ್ಲಿ ಆಪಾದಿತನನ್ನು ವಿಮುಕ್ತಗೊಳಿಸಬೇಕು.

(ಐ) ಮೂರು ವರ್ಷ ಸಜಾ ಸಿಗುವಂತಹ ಅಪರಾಧ ಮಾಡಿದ್ದು, 2 ವರ್ಷಗಳಿಗಿಂತ ಹೆಚ್ಚು ಕಾಲ ಅದು ಇತ್ಯರ್ಥಗೊಳ್ಳದಿದ್ದಲ್ಲಿ ಕ್ರಿಮಿನಲ್ ನ್ಯಾಯಾಲಯ ಆಪಾದಿತನನ್ನು ವಿಮುಕ್ತಗೊಳಿಸಿ ಪ್ರಕರಣವನ್ನು ಅಲ್ಲಿಗೆ ಮುಕ್ತಾಯಗೊಳಿಸಬೇಕು.

ಆದರೆ, ಈ ಕೆಳಗೆ ಹೇಳಿರುವಂತಹ ಅಪರಾಧ ಪ್ರಕರಣಗಳಿಗೆ ನ್ಯಾಯಾಲಯದ ಆದೇಶಗಳು ಅನ್ವಯವಾಗುವುದಿಲ್ಲ. (ಎ) ಭಾರತೀಯ ದಂಡಸಂಹಿತೆ, ಭ್ರಷ್ಟಾಚಾರ ತಡೆ ಕಾಯ್ದೆ, 1947 ಅಥವಾ ಇನ್ನಿತರ ಯಾವುದೇ ಕಾಯ್ದೆಯಡಿಯಲ್ಲಿ ಮಾಡಿರುವ ಭ್ರಷ್ಟಾಚಾರ, ಸಾರ್ವತ್ರಿಕ ನಿಧಿಯ ದುರ್ಬಳಕೆ, ವಂಚನೆ, (ಬಿ) ನಾರ್ಕೋಟಿಕ್ ಡ್ರಗ್ಸ್ ಮತ್ತು ಸೈಕೋಟ್ರೋಪಿಕ್ ವಸ್ತುಗಳ ಕಾಯ್ದೆ, 1985ರ ಕೆಳಗೆ ಬರುವ ಕಳ್ಳ ಸಾಗಾಣಿಕೆ, ವಿದೇಶಿ ವಿನಿಮಯ ಉಲ್ಲಂಘನೆ ಮತ್ತಿತರ ಅಪರಾಧಗಳು, (ಸಿ) ಅಗತ್ಯ ವಸ್ತುಗಳ ಕಾಯ್ದೆ, 1955, ಆಹಾರ ಕಲಬೆರಕೆ ಕಾಯ್ದೆ ಹಾಗೂ ಪಾರಿಸಾರಿಕ ವಿಚಾರಗಳಿಗೆ ಸಂಬಂಧಿಸಿದ ಹಾಗೂ ಆರ್ಥಿಕ ಅಪರಾಧಗಳಿಗೆ ಸಂಬಂಧಿಸಿದ ಕಾಯ್ದೆಗಳಡಿಯಲ್ಲಿ ಬರುವಂತಹ ಅಪರಾಧಗಳು, (ಡಿ) ಶಸ್ತ್ರಾಸ್ತ್ರಗಳ ಕಾನೂನು, 1959, ಸ್ಫೋಟಕ ವಸ್ತುಗಳ ಕಾನೂನು, 1908, ಭಯೋತ್ಪಾದನೆ ಮತ್ತು ವಿನಾಶಕಾರಿ ಚಟುವಟಿಕೆಗಳ ಕಾಯ್ದೆ, 1987, ಇವುಗಳ ವ್ಯಾಪ್ತಿಯಲ್ಲಿ ಬರುವ ಅಪರಾಧಗಳು, (ಇ) ಭೂ, ಜಲ ಹಾಗೂ ವಾಯು ಸೇನೆಗಳಿಗೆ ಸಂಬಂಧಪಟ್ಟ ಅಪರಾಧಗಳು, (ಎಫ್) ಸಾರ್ವಜನಿಕ ನೆಮ್ಮದಿ ಕೆಡಿಸುವುದಕ್ಕೆ ಸಂಬಂಧಿಸಿದ ಅಪರಾಧಗಳು, (ಜಿ) ಸಾರ್ವಜನಿಕ ಸೇವಕರಿಗೆ ಸಂಬಂಧಪಟ್ಟ ಅಪರಾಧಗಳು (ಎಚ್) ಚುನಾವಣೆಗೆ ಸಂಬಂಧಿಸಿದ ಅಪರಾಧಗಳು, (ಜೆ) ಸುಳ್ಳು ಸಾಕ್ಷಿ ಹೇಳುವುದಕ್ಕೆ ಸಂಬಂಧಿಸಿದ ಮತ್ತು ಸಾರ್ವಜನಿಕ ನ್ಯಾಯಕ್ಕೆ ವಿರುದ್ಧವಾದ ಅಪರಾಧಗಳು, (ಕೆ)ಪ್ರಭುತ್ವದ ವಿರುದ್ಧವಾಗಿರುವ ಯಾವುದೇ ವಿಧವಾದ ಅಪರಾಧಗಳು (ಎಲ್) ತೆರಿಗೆ ಪಾವತಿಗೆ ಸಂಬಂಧಿಸಿದ ಕಾನೂನುಗಳಿಗೆ ವಿರುದ್ಧವಾಗಿರುವ ಅಪರಾಧಗಳು (ಎಮ್) ಭಾರತೀಯ ದಂಡ ಸಂಹಿತೆ ಪರಿಚ್ಛೇದ 499ರಲ್ಲಿ ನಿರ್ವಚಿಸಲಾಗಿರುವ ಅಪರಾಧಗಳು.

ಮುಂದುವರೆದು, ಮೇಲೆ ಹೇಳಿರುವ ಅಪರಾಧಗಳ ವಿಚಾರಣೆಯನ್ನು ಆದ್ಯತೆಯ ಮೇರೆಗೆ ಮಾಡಬೇಕೆಂದು ಕ್ರಿಮಿನಲ್ ನ್ಯಾಯಾಲಯಗಳಿಗೆ ಸರ್ವೋಚ್ಚ ನ್ಯಾಯಾಲಯ ಮತ್ತೆ ಆದೇಶಿಸಿರುತ್ತದೆ. ಉಚ್ಚ ನ್ಯಾಯಾಲಯಗಳ ನಿಯಂತ್ರಣ ಹಾಗೂ ಉಸ್ತುವಾರಿಕೆಯಲ್ಲಿರುವ ಕ್ರಿಮಿನಲ್ ನ್ಯಾಯಾಲಯಗಳಿಗೆ ಇದರ ಪರವಾಗಿ ಅಗತ್ಯವಾದ ಆದೇಶಗಳನ್ನು ನೀಡಬೇಕೆಂದು ಅವುಗಳನ್ನು ಕೋರಲಾಗಿದೆ.

ವಿಚಾರಣಾಧೀನ ಖೈದಿಗಳಿಗೆ ಜಾಮೀನು ನೀಡುವಂತಹ ಪ್ರಕ್ರಿಯೆಯನ್ನು ನೇರಗೊಳಿಸುವುದು ಹಾಗೂ ಅದನ್ನು ಸಮಯಕ್ಕೆ ಸರಿಯಾಗಿ ಮಾಡುವಂತೆ ಮಾಡುವುದು ಸರ್ವೋಚ್ಚ ನ್ಯಾಯಾಲಯಗಳ ಈ ಆದೇಶಗಳ ಉದ್ದೇಶವಾಗಿರುತ್ತದೆ. ಮನವಿ ಸಲ್ಲಿಸಿರುವವರಿಗೆ ವಿಚಾರಣೆ ನಡೆಸುವ ನ್ಯಾಯಾಲಯಗಳು ತಾವೇ ಮುಂದಾಗಿ ಜಾಮೀನು ನೀಡಲು ತೀರ್ಪಿನಲ್ಲಿ ಅವಕಾಶಗಳಿಲ್ಲ. ಜಾಮೀನು ನೀಡಲು ನ್ಯಾಯಾಲಯಗಳು ಮುಂದೆ ಬರಬೇಕಾದರೆ ಜಾಮೀನು ಬೇಡುವವರು ನ್ಯಾಯಾಲಯಗಳಿಗೆ ಮನವಿ ಸಲ್ಲಿಸಬೇಕು ಎಂಬುದು ಇದರ ಉದ್ದೇಶವಾಗಿದೆ. ಪ್ರಕರಣಗಳು ತಮ್ಮಷ್ಟಕ್ಕೇ ಮುಕ್ತಾಯಗೊಳ್ಳುವಂತಹ ಕಾರ್ಯವಿಧಾನಗಳು ನ್ಯಾಯಾಲಯಗಳಲ್ಲಿ ಇಲ್ಲ. ಜಾಮೀನು ಅರ್ಜಿಗಳ ಸಲ್ಲಿಕೆಯ ಮೇಲೆ ಹಾಗೂ ಸಮಯಕ್ಕೆ ಸರಿಯಾಗಿ ಖೈದಿಗಳನ್ನು ಹಾಜರುಪಡಿಸುವುದರ ಮೇಲೆ ನ್ಯಾಯಾಲಯಗಳು ಅವಲಂಬಿಸಿರುತ್ತವೆ. ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ಪ್ರಕಾರ ವಿಚಾರಣಾಧೀನ ಖೈದಿಗಳನ್ನು ಬಿಡುಗಡೆ ಮಾಡಲು ಸೂಕ್ತವಾದ ಕ್ರಮಗಳನ್ನು ಕೈಗೊಳ್ಳಲು ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಅವರನ್ನು ಮತ್ತು ರಾಜ್ಯ ಕಾನೂನು ಸಲಹಾ ಮಂಡಳಿಯನ್ನು ಭೇಟಿ ಮಾಡಬೇಕೆಂದು ಹಾಗೂ ಅಪೆಕ್ಸ್ ನ್ಯಾಯಾಲಯದ ತೀರ್ಪುಗಳನ್ನು ಗಣನೆಗೆ ತೆಗೆದುಕೊಳ್ಳಬೇಕೆಂದು ತಮ್ಮನ್ನು ಕೋರಲಾಗಿದೆ. ವಿಚಾರಣಾಧೀನ ಖೈದಿಗಳನ್ನು ಬಿಡುಗಡೆಗೊಳಿಸಿದಲ್ಲಿ ಕಾರಾಗೃಹಗಳಲ್ಲಿನ ಜನದಟ್ಟಣೆ ಕಡಿಮೆಯಾಗುತ್ತದೆ ಮತ್ತು ಕಾರಾಗೃಹಗಳ ಮೇಲ್ವಿಚಾರಣೆ ಹೆಚ್ಚು ಪರಿಣಾಮಕಾರಿಯಾಗುತ್ತದೆ. ಈ ಪ್ರಕ್ರಿಯೆಗೆ ನ್ಯಾಯಾಂಗ, ಪೊಲೀಸ್ ಮತ್ತು ಕಾರಾಗೃಹ ಆಡಳಿತದ ನಡುವೆ ಉನ್ನತ ಮಟ್ಟದ ಉನ್ನತ ಮಟ್ಟದ ಸಂಯೋಜನೆ ಬೇಕಾಗುತ್ತದೆ. ದುರಾದೃಷ್ಟವಶಾತ್ ಈಗ ಅದರ ಕೊರತೆ ಕಂಡು ಬರುತ್ತಿದೆ.

ಬಹುತೇಕ ವಿಚಾರಣಾಧೀನ ಖೈದಿಗಳು ಸಮಾಜದ ಬಡ, ಅವಕಾಶ ವಂಚಿತ ವರ್ಗಗಳಿಗೆ ಸೇರಿದ ಗ್ರಾಮೀಣರು ಹಾಗೂ ವ್ಯವಸಾಯದ ಹಿನ್ನೆಲೆಯುಳ್ಳವರೂ ಆಗಿರುತ್ತಾರೆ.

ತಮ್ಮ ವಿಶ್ವಾಸಿ,

ಸಹಿ/-

**(ಶಂಕರ್ ಸೇನ್)**

ರವರಿಗೆ,

ಕಾರಾಗೃಹಗಳ ಇನ್ಸ್‌ಪೆಕ್ಟರ್ ಜನರಲ್‌ಗಳಿಗೆ.

# ಕಾರಾಗೃಹಗಳಲ್ಲಿನ ಮಾನವ ಹಕ್ಕುಗಳಿಗೆ ಸಂಬಂಧಿಸಿದಂತೆ ಎಲ್ಲ ಉಚ್ಚ ನ್ಯಾಯಾಲಯಗಳ ಮುಖ್ಯ ನ್ಯಾಯಾಧೀಕ್ಷಕರುಗಳಿಗೆ ಬರೆದ ಪತ್ರ

ನ್ಯಾಯಮೂರ್ತಿ ಜೆ. ಎಸ್. ವರ್ಮಾ
ಅಧ್ಯಕ್ಷರು
(ಭಾರತದ ಮಾಜಿ ಮುಖ್ಯನ್ಯಾಯಮೂರ್ತಿಗಳು)

ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ
ಸರ್ದಾರ್ ಪಟೇಲ್ ಭವನ, ಸಂಸದ್ ಮಾರ್ಗ,
ನವ ದೆಹಲಿ - 110 001 ಭಾರತ

ಜನವರಿ 1, 2000

ಆತ್ಮೀಯರಾದ ಮುಖ್ಯ ನ್ಯಾಯಾಧೀಕ್ಷಕರೇ,

ತಮಗೆ ತಿಳಿದಿರುವಂತೆ, 1993ರ ಮಾನವ ಹಕ್ಕುಗಳ ರಕ್ಷಣಾ ಕಾಯ್ದೆ ಪ್ರಕಾರ, ಕಾರಾಗೃಹಗಳನ್ನು ಸಂದರ್ಶಿಸಿ, ಖೈದಿಗಳ ಸ್ಥಿತಿಗತಿಗಳ ಅಧ್ಯಯನ ಮಾಡಿ ಪರಿಹಾರ ಕ್ರಮಗಳನ್ನು ಶಿಫಾರಸು ಮಾಡುವುದು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಪ್ರಮುಖ ಕರ್ತವ್ಯಗಳಲ್ಲಿ ಒಂದಾಗಿದೆ. ಕಳೆದ ಐದು ವರ್ಷಗಳಲ್ಲಿ ಆಯೋಗದ ಸದಸ್ಯರು ಮತ್ತು ಹಿರಿಯ ಅಧಿಕಾರಿಗಳು ದೇಶದ ಹಲವು ಕಾರಾಗೃಹಗಳನ್ನು ಭೇಟಿ ಮಾಡಿ, ಕಾರಾಗೃಹಗಳು ಅತಿಯಾದ ಜನ ದಟ್ಟಣೆಯಿಂದ ಕೂಡಿರುವುದನ್ನೂ, ಅಲ್ಲಿನ ಅನಾರೋಗ್ಯಕರವಾದ ಪರಿಸ್ಥಿತಿ ಇರುವುದನ್ನೂ, ಕಾರಾಗೃಹಗಳ ಆಡಳಿತದಲ್ಲಿನ ಅವ್ಯವಸ್ಥೆಯನ್ನೂ ಕಂಡು ಆತಂಕಕ್ಕೊಳಗಾಗಿದ್ದೇವೆ.

ಜಿಲ್ಲಾ ಸೆಷನ್ಸ್ ನ್ಯಾಯಾಧೀಶರುಗಳು ತಮ್ಮ ಅಧಿಕಾರ ವ್ಯಾಪ್ತಿಯೊಳಗಿರುವ ಕಾರಾಗೃಹಗಳಿಗೆ ಅಧಿಕಾರ ಪ್ರಯುಕ್ತ ಸಂದರ್ಶಕರಾಗಿ ಪ್ರವರ್ತಿಸುವಂತೆ ಕಾರಾಗೃಹ ನಿವಾಸಿಗಗೆ ಅವರ ಆರೋಗ್ಯ, ಶುಚಿತ್ವ, ಸಂಸ್ಥೆಯೊಂದು ನಡೆಸಿಕೊಳ್ಳಬೇಕಾದ ರೀತಿಗೆ ಸಂಬಂಧಪಟ್ಟಂತೆ ಕೆಲವು ಮಾನದಂಡಗಳನ್ನು ನಿಗದಿ ಪಡಿಸುವಂತೆ ರಾಜ್ಯ ಕಾರಾಗೃಹದ ಪುಸ್ತಿಕೆಯಲ್ಲಿ ಹೇಳಲಾಗಿದೆ. ಖೈದಿಗಳು ನ್ಯಾಯಾಂಗ ಬಂಧನದಲ್ಲಿರುತ್ತಾರೆ. ಆದ್ದರಿಂದ ಅವರ ಬದುಕಿನ ಸ್ಥಿತಿಗತಿಗಳ ಮೇಲ್ವಿಚಾರಣೆ ಮಾಡುವುದು ಮತ್ತು ಕಾರಾಗೃಹದೊಳಗೆ ಮಾನವೀಯ ವಾತಾವರಣ ಮೂಡಿಸುವಂತೆ ನೋಡಿಕೊಳ್ಳುವುದು ಸೆಷನ್ಸ್ ನ್ಯಾಯಾಧೀಶರುಗಳ ಕರ್ತವ್ಯವಾಗಿರುತ್ತದೆ. ಕಾರಾಗೃಹದ ಹೆಬ್ಬಾಗಿಲುಗಳು ಖೈದಿ ಮತ್ತು ಮಾನವ ಹಕ್ಕುಗಳ ನಡುವಿನ ಕಬ್ಬಿಣದ ಪರದೆಯಲ್ಲ ಎಂದು ನ್ಯಾಯಮೂರ್ತಿ ಕೃಷ್ಣ ಅಯ್ಯರ್ ಸೂಕ್ತವಾಗಿ ಹೇಳಿದ್ದಾರೆ. ಮಾತ್ರವಲ್ಲದೆ, ಈ ಉದ್ದೇಶದಿಂದಾಗಿ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರುಗಳು ಕಾರಾಗೃಹಗಳಿಗೆ ಭೇಟಿ ನೀಡಲೇಬೇಕು ಮತ್ತು ಇದು ಅವರ ಕರ್ತವ್ಯ ಪಾಲನೆಗೆ ಸಂಬಂಧಿಸಿದ ಅನಿವಾರ್ಯವಾದ ಒಂದು ಕೆಲಸ ಎಂದು ಪರಿಗಣಿತವಾಗಬೇಕೆಂದು ಸರ್ವೋಚ್ಚ ನ್ಯಾಯಾಲಯ ಪ್ರತ್ಯೇಕವಾಗಿ ನಿರ್ದೇಶಿಸಿರುತ್ತದೆ. ಖೈದಿಗಳ ಕುಂದು ಕೊರತೆಗಳ ನಿವೇದನೆಗಳ ಶೀಘ್ರ ತನಿಖೆ ನಡೆಸಿ, ತಕ್ಕ ಪರಿಹಾರ ಕ್ರಮಗಳನ್ನು ಕೈಗೊಳ್ಳುವಂತೆ ಮಾಡಬೇಕು.

ಸೆಷನ್ಸ್ ನ್ಯಾಯಾಧೀಶರುಗಳು ಕಾರಾಗೃಹಗಳನ್ನು ಕ್ರಮವಾಗಿ ಭೇಟಿ ಮಾಡುತ್ತಿಲ್ಲವೆಂದು ಮತ್ತು ಸೆಷನ್ಸ್ ನ್ಯಾಯಾಧೀಶರು/ಜಿಲ್ಲಾ ಮ್ಯಾಜಿಸ್ಟ್ರೇಟರರು ಅಧ್ಯಕ್ಷರಾಗಿದ್ದು, ಹಿರಿಯ ಪೊಲೀಸ್ ವರಿಷ್ಠಾಧಿಕಾರಿಗಳನ್ನೊಳಗೊಂಡಿರುವ ಜಿಲ್ಲಾ ಸಮಿತಿಯು ಕಾರಾಗೃಹಗಳ ಸ್ಥಿತಿಗತಿಯನ್ನು ಪರಿಶೀಲಿಸುವುದಕ್ಕಾಗಿ ನಿಯಮಿತ ಅವಧಿಗಳಲ್ಲಿ ಸಭೆ ಸೇರುತ್ತಿಲ್ಲವೆಂದು ಜಿಲ್ಲಾ ಕಾರಾಗೃಹಗಳ ಭೇಟಿಯ ಸಂದರ್ಭದಲ್ಲಿ ಆಯೋಗಕ್ಕೆ ತಿಳಿದು ಬಂದಿದೆ.

ಬಹುತೇಕ ಕಾರಾಗೃಹಗಳಲ್ಲಿ ವಿಚಾರಣಾಧೀನ ಖೈದಿಗಳು ಹೆಚ್ಚಿನ ಸಂಖ್ಯೆಯಲ್ಲಿ ಇದ್ದಾರೆ. ಇವರಲ್ಲಿ ಹೆಚ್ಚಿನವರು ಸಣ್ಣ ಪುಟ್ಟ ತಪ್ಪುಗಳನ್ನು ಮಾಡಿ ಕಾರಾಗೃಹಗಳಲ್ಲಿ ನರಳುತ್ತಿದ್ದಾರೆ. ಇವುಗಳನ್ನು ಪುನರಾವರ್ತಿಸುವ ಅವಶ್ಯಕತೆಯಿಲ್ಲ ಎಂಬ ಕಾರಣಕ್ಕಾಗಿ ಇವರ ಪ್ರಕರಣಗಳ ತೀರ್ಪು ಶೀಘ್ರವಾಗಿ ಆಗುವುದಿಲ್ಲ. ಜಿಲ್ಲಾ ನ್ಯಾಯಾಧೀಶರು ತಮ್ಮ ಭೇಟಿಗಳಲ್ಲಿ ಇದನ್ನು ಗಮನಿಸಿ ಆದಷ್ಟು ಬೇಗ ನ್ಯಾಯ ವಿಚಾರಣೆ ನಡೆಯುವಂತೆ ನೋಡಿಕೊಳ್ಳಬಹುದು. ಸರ್ವೋಚ್ಚ ನ್ಯಾಯಾಲಯವು ತನ್ನ ಹಲವು ತೀರ್ಪುಗಳಲ್ಲಿ ಈ ವಿಚಾರದ ಕುರಿತು ಗಮನ ಹರಿಸಿದೆ ಮತ್ತು ಕಾರಾಗೃಹ ಆಡಳಿತದಲ್ಲಿರುವ ಸಮಸ್ಯೆಗಳನ್ನು ಅದು ಉಲ್ಲೇಖಿಸಿರುತ್ತದೆ. ಶೀಘ್ರ ವಿಚಾರಣೆ ಕೈಗೊಳ್ಳುವುದರ ಮೂಲಕ ಖೈದಿಗಳ ಸಂಖ್ಯೆಯನ್ನು ಕಡಿಮೆಗೊಳಿಸುವುದಕ್ಕೆ ತಕ್ಷಣವೇ ಕ್ರಮ ಕೈಗೊಳ್ಳಬೇಕಾದ ಅಗತ್ಯತೆಯನ್ನು, ಆ ಮೂಲಕ ಸಂವಿಧಾನದ 21ನೇ ಪರಿಚ್ಛೇದದಲ್ಲಿ ನೀಡಲಾಗಿರುವ ನ್ಯಾಯದ ಅವಕಾಶವನ್ನು ಕಾರ್ಯರೂಪಕ್ಕೆ ತರುವಂತೆ ಮಾಡಬಹುದೆಂದು ಸರ್ವೋಚ್ಚ ನ್ಯಾಯಾಲಯ ಒತ್ತಿ ಹೇಳಿರುತ್ತದೆ.

ಸಂವಿಧಾನದತ್ತ ಭರವಸೆಯಾಗಿರುವ ಮಾನವ ಹಕ್ಕುಗಳ ಉಲ್ಲಂಘನೆಯಾಗುವ ಈ ತೀವ್ರವಾದ ಸಮಸ್ಯೆಯನ್ನು ಪರಿಹರಿಸುವುದಕ್ಕೆ ಅಗತ್ಯವಾದ ಕ್ರಮಗಳನ್ನು ಕೈಗೊಳ್ಳುವುದಕ್ಕಾಗಿ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರುಗಳಿಗೆ ಸೂಕ್ತ ನಿರ್ದೇಶನಗಳನ್ನು ನೀಡಬೇಕೆಕಂದು ಕೋರುತ್ತೇನೆ.

ಈ ವಿಚಾರದಲ್ಲಿ ತಮ್ಮ ಪ್ರತಿಕ್ರಿಯೆಗೆ ನಾನು ಅಭಾರಿಯಾಗಿರುತ್ತೇನೆ.

ತಮ್ಮ ವಿಶ್ವಾಸಿ,

ಸಹಿ/-

**(ಜೆ. ಎಸ್. ವರ್ಮಾ)**

ರವರಿಗೆ

ಉಚ್ಚ ನ್ಯಾಯಾಲಯಗಳ ಮುಖ್ಯ ನ್ಯಾಯಾಧೀಶರುಗಳು.

# ಖೈದಿಗಳಿಗೆ ಓದುವ ಸಾಮಗ್ರಿಗಳನ್ನು ಪೂರೈಸುವುದರ ಬಗೆಗಿನ ಮಾರ್ಗಸೂಚಿ

ಸಂ.68/5/97-98
ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ
(ಕಾನೂನು ವಿಭಾಗ - V)

**ಇ. ಐ. ಮಳೇಕರ್**
ಸಹಾಯಕ ರಿಜಿಸ್ಟ್ರಾರರು (ಕಾನೂನು)

ಮಾರ್ಚ್ 1, 2000

ರವರಿಗೆ

ಮುಖ್ಯ ಕಾರ್ಯದರ್ಶಿಗಳು/ಆಡಳಿತಾಧಿಕಾರಿಗಳು
ಎಲ್ಲ ರಾಜ್ಯಗಳು/ಕೇಂದ್ರ ಶಾಸಿತ ಪ್ರದೇಶಗಳು

**ವಿಷಯ:** ಶ್ರೀ ವೈ. ಪಿ. ಚಿಬ್ಬಾರ್‌ರ ದೂರು

ಮಾನ್ಯರೆ,

ಮೇಲೆ ಸೂಚಿಸಲಾಗಿರುವ ಪ್ರಕರಣವು ದಿನಾಂಕ 28.2.2000ದಂದು ಆಯೋಗದ ಮುಂದೆ ಬಂದಿದ್ದು, ಆಯೋಗ ಈ ಕೆಳಗಿನಂತೆ ನಿರ್ದೇಶಿಸಿರುತ್ತದೆ.

" ಮಾರ್ಗಸೂಚಿಗಳು ಅಂಗೀಕರಿಸಲ್ಪಟ್ಟಿರುತ್ತವೆ. ಖೈದಿಗಳಿಗೆ ಓದುವ ಸಾಮಗ್ರಿಯನ್ನು ಪೂರೈಸುವುದರ ಕುರಿತಂತೆ ಎಲ್ಲ ರಾಜ್ಯಗಳ/ಕೇಂದ್ರ ಶಾಸಿತ ಪ್ರದೇಶಗಳ ಮುಖ್ಯ ಕಾರ್ಯದರ್ಶಿಗಳಿಗೆ ಅದನ್ನು ಕಳುಹಿಸಿ ಕೊಡಲಾಗಿದೆ. ಅವರು ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಬರುವ ಸಂಬಂಧಪಟ್ಟ ವ್ಯಕ್ತಿಗಳಿಗೆ ಕಳುಹಿಸಿ ಓದುವ ಸಾಮಗ್ರಿಗಳನ್ನು ಖೈದಿಗಳಿಗೆ ಪೂರೈಸುವಂತೆ ಸೂಚಿಸಿ ಅದರ ಅನುಸರಣಾ ವರದಿಯನ್ನು ಎಂಟು ವಾರಗಳೊಳಗಾಗಿ ಕಳುಹಿಸಿಕೊಡತಕ್ಕದ್ದು".

ಆದ್ದರಿಂದ, ಆಯೋಗದ ಮಾರ್ಗಸೂಚಿಗಳ ಪ್ರತಿಯೊಂದನ್ನು ಇದರೊಂದಿಗೆ ಲಗತ್ತಿಸಲಾಗಿದ್ದು, ದಿನಾಂಕ 24.4.2000ದೊಳಗಾಗಿ ಆಯೋಗದ ಮುಂದೆ ಸಲ್ಲಿಸುವ ಹಾಗೆ ಅನುಸರಣಾ ವರದಿಯನ್ನು ನೀಡಬೇಕೆಂದು ಕೋರುತ್ತೇನೆ.

ಅಡಕ: ಮೇಲೆ ಹೇಳಿರುವಂತೆ (ಎರಡು ಪುಟಗಳಲ್ಲಿ)

ತಮ್ಮ ವಿಶ್ವಾಸಿ,

ಸಹಿ/-

**ಸಹಾಯಕ ರಿಜಿಸ್ಟ್ರಾರ್ (ಕಾನೂನು)**

# ಖೈದಿಗಳಿಗೆ ಓದುವ ಸಾಮಗ್ರಿ ಪೂರೈಕೆ ಕುರಿತ ಮಾರ್ಗಸೂಚಿ

ಖೈದಿಗಳಿಗೆ ಸಿಗಬೇಕಾದ ಓದುವ ವಸ್ತುಗಳ ಸ್ವರೂಪ ಹಾಗೂ ವ್ಯಾಪ್ತಿಯ ಪ್ರಶ್ನೆ ಆಯೋಗದ ಗಮನಕ್ಕೆ ಬಂದಿತು. ಈ ಸಮಸ್ಯೆಯ ಕುರಿತು ಜಾಗ್ರತೆಯಿಂದ ವಿಚಾರ ಮಾಡಿದ ನಂತರ ಈ ಕೆಳಕಂಡಂತೆ ಮಾರ್ಗಸೂಚಿಗಳನ್ನು ನೀಡಲು ಆಯೋಗ ಇಚ್ಛಿಸುತ್ತದೆ.

i) ಬಂಧನದಲ್ಲಿರುವಾಗಲೂ ಖೈದಿಗಳಿಗೆ ಘನತೆಯಿಂದ ಬದುಕುವ ಹಕ್ಕು ಇರುತ್ತದಾದ್ದರಿಂದ , ಸಮಾಜದಲ್ಲಿ ಅವರ ಪುನರ್ವಸತಿಯನ್ನು ಸುಸಾಧ್ಯ ಮಾಡುವ ದೃಷ್ಟಿಯಿಂದ ಮತ್ತು ಅವರು ಉತ್ಪಾದಕ ನಾಗರಿಕರಾಗಬೇಕು ಎಂಬ ಉದ್ದೇಶದೊಂದಿಗೆ ಅವರ ಕುಶಲತೆಯನ್ನು ಅಭಿವೃದ್ಧಿಪಡಿಸಲು ನೆರವಾಗಬೇಕು. ಆದ್ದರಿಂದ,ಓದುವ ವಸ್ತುಗಳಿಗಾಗಿ ಖೈದಿಗಳ ಮೇಲೆ ಅನಗತ್ಯನಿರ್ಬಂಧ ಹೇರುವುದು ಸೂಕ್ತವಲ್ಲ.

ii) ಎಲ್ಲಾ ಖೈದಿಗಳಿಗೂ ಇಂತಹ ಓದುವ ಸಾಮಗ್ರಿಗಳು ಸಿಗುವಂತೆ ಇರಬೇಕು. ಏಕೆಂದರೆ ಅವು, ಅವರ ವಿನೋದಕ್ಕಾಗಿ ಅಥವಾ ಕಾರಾಗೃಹದಲ್ಲಿರುವಾಗ ಶಿಕ್ಷಣವನ್ನು ಮುಂದುವರೆಸಬೇಕೆನ್ನುವ ಅವರ ಸಾಮರ್ಥ್ಯವನ್ನೂ ಒಳಗೊಂಡಂತೆ ಅವರ ಕುಶಲತೆ ಮತ್ತು ವ್ಯಕ್ತಿತ್ವವನ್ನು ಪೋಷಿಸುವುದಕ್ಕೆ ಅತ್ಯಗತ್ಯವಾಗಿರುತ್ತದೆ.

iii) ಎಲ್ಲ ವಿಭಾಗದ ಖೈದಿಗಳಿಗೂ ಉಪಯೋಗವಾಗುವಂತೆ, ಮನರಂಜನೆ ನೀಡುವಂತಹ, ಮಾರ್ಗದರ್ಶನ ಮಾಡುವಂತಹ ಪುಸ್ತಕಗಳು ಸಾಕಷ್ಟು ಸಂಖ್ಯೆಯಲ್ಲಿ ಇರುವಂತಹ ಗ್ರಂಥಾಲಯ ಪ್ರತಿಯೊಂದು ಕಾರಾಗೃಹದಲ್ಲಿ ಇರಬೇಕು. ಇದನ್ನು ಉಪಯೋಗಿಸುವುದಕ್ಕೆ ಖೈದಿಗಳನ್ನೂ ಪ್ರೋತ್ಸಾಹಿಸಬೇಕು. ಗ್ರಂಥಾಲಯಗಳಲ್ಲಿರುವ ಪುಸ್ತಕಗಳು ಕಾರಾಗೃಹದಲ್ಲಿರುವ ಖೈದಿಗಳ ಪ್ರಮಾಣ ಮತ್ತು ಸ್ವರೂಪಕ್ಕೆ ತಕ್ಕಂತಿರಬೇಕು.

iv) ಕಾರಾಗೃಹದಲ್ಲಿರುವ ವಿವಿಧ ರೀತಿಯ ಗುಂಪುಗಳಿಗೆ ವೈವಿಧ್ಯಮಯವಾದ ಕಾರ್ಯಕ್ರಮಗಳನ್ನು ಕಾರಾಗೃಹದ ಅಧಿಕಾರಿಗಳು ರೂಪಿಸಬೇಕು. ಮಹಿಳಾ ಖೈದಿಗಳು, ಸಣ್ಣ ವಯಸ್ಸಿನವರು, ನಿರಕ್ಷರಿಗಳು ಇವರನ್ನೆಲ್ಲ ಗಮನದಲ್ಲಿರಿಸಿಕೊಂಡು ಸೂಕ್ತವಾದ ಮನರಂಜನಾ ಮತ್ತು ಶೈಕ್ಷಣಿಕ ಸಾಮಗ್ರಿಗಳನ್ನು ಪ್ರತ್ಯೇಕವಾಗಿ ವ್ಯವಸ್ಥೆ ಮಾಡಬೇಕು. ಇಂತಹ ಕಾರ್ಯಕ್ರಮಗಳನ್ನು ರೂಪಿಸುವಾಗ ಖೈದಿಗಳ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳಬೇಕು.

v) ಇದರೊಂದಿಗೆ, ಸಾಮಾನ್ಯವಾಗಿ ಖೈದಿಗಳು ಹೊರಗಿನಿಂದಲೂ ಓದುವ ಸಾಮಗ್ರಿಗಳನ್ನು ಪಡೆದುಕೊಳ್ಳಲು ಅನುಮತಿಯಿದೆ. ಆದರೆ, ಅಂತಹ ಸಾಮಗ್ರಿಗಳು ಪ್ರಮಾಣದಲ್ಲಿ ಸಮರ್ಪಕವಾಗಿದ್ದು, ಓದುವ ಸಾಮಗ್ರಿಗಳ ದರಪಟ್ಟಿಯನ್ನು ಏಕಾಏಕಿ ಕರೆಯಬಾರದು. ಖೈದಿಗಳಿಗೆ ಓದುವ ಸಾಮಗ್ರಿ ನೀಡುವಾಗ ಸಾಮಗ್ರಿಗಳ ಪ್ರಮಾಣ ಮತ್ತು ಸ್ವರೂಪವನ್ನು ಖೈದಿಯ ವೈಯಕ್ತಿಕ ಅವಶ್ಯಕತೆಯನ್ನು ಅನುಸರಿಸಿ ಗರಿಷ್ಠ ಮಿತಿಯಲ್ಲಿ ನೀಡಬೇಕು.

vi) ಕಾರಾಗೃಹಗಳ ಅಧೀಕ್ಷಕರು ಓದುವ ಸಾಮಗ್ರಿಗಳ ಯುಕ್ತಾಯುಕ್ತತೆಯನ್ನು ನಿರ್ಣಯಿಸುವಾಗ ಅದನ್ನು ಕಾನೂನು ಮಾರ್ಗದರ್ಶನಕ್ಕೆ ಅನುಸಾರವಾಗಿ ಮಾಡಬೇಕು;ತಮ್ಮ ಅಧಿಕಾರವನ್ನು ಏಕಾಕಿಯಾಗಿ ಚಲಾಯಿಸುವುದರ ಮೂಲಕ ಅದನ್ನು ಮಾಡುವಂತಿಲ್ಲ.

ಕಾರಾಗೃಹಗಳ ಪ್ರಸ್ತುತ ನೀತಿನಿಯಮಗಳಲ್ಲಿ ಮೇಲೆ ತಿಳಿಸಲಾಗಿರುವ ಮಾರ್ಗಸೂಚಿಗಳನ್ನು ಅಳವಡಿಸಿಕೊಂಡು ತಿದ್ದುಪಡಿ ಮಾಡಿಕೊಳ್ಳಬೇಕೆಂದು ಆಯೋಗ ಎಲ್ಲ ರಾಜ್ಯ ಹಾಗೂ ಕೇಂದ್ರ ಶಾಸಿತ ಪ್ರದೇಶಗಳ ಉನ್ನತ ಅಧಿಕಾರಿಗಳಿಗೆ ಶಿಫಾರಸು ಮಾಡುತ್ತದೆ.

# ಮಹಿಳೆಯರ ಹಕ್ಕುಗಳು

## ವಿಚ್ಛೇದಿತ ಮಹಿಳೆಯರ ನಿರ್ವಹಣಾ ಭತ್ಯೆಯಲ್ಲಿನ ಹೆಚ್ಚಳ

ಎನ್. ಗೋಪಾಲಸ್ವಾಮಿ (ಭಾ.ಆ.ಸೇ.)
ಮಹಾ ಕಾರ್ಯದರ್ಶಿಗಳು

ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ

ಸೆಪ್ಟೆಂಬರ್ 19, 2000

ಆತ್ಮೀಯರೇ

1.0 ಹರ್ಯಾಣ ಸರ್ಕಾರದ ಸಮಾಜ ಕಲ್ಯಾಣ ಇಲಾಖೆಯ ಹಣಕಾಸು ಆಯುಕ್ತರೂ ಪ್ರಧಾನ ಕಾರ್ಯದರ್ಶಿಗಳೂ ಆಗಿರುವ ಶ್ರೀಮತಿ ದೀಪಾ ಜೈನ್ ಸಿಂಗ್ ಆಯೋಗಕ್ಕೆ ಮಾಡಿರುವ ಕೆಲವು ಸಲಹೆಗಳನ್ನು ಹರ್ಯಾಣ ಸರ್ಕಾರದ ಮುಖ್ಯ ಕಾರ್ಯದರ್ಶಿಗಳಾದ ಶ್ರೀ ರಾಮ್ ಎಸ್. ವರ್ಮಾ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗಕ್ಕೆ ಪರಿಗಣನೆಗಾಗಿ ಕಳುಹಿಸಿಕೊಟ್ಟಿದ್ದಾರೆ. ಇಲ್ಲಿಕ ಸೂಚಿತವಾಗಿರುವ ವಿಚಾರಗಳಲ್ಲಿ ಒಂದು, ಅಪರಾಧ ದಂಡ ಸಂಹಿತೆಯ ಪರಿಚ್ಛೇದ 125ರಲ್ಲಿರ ನೀಡಲಾಗಿರುವ ಅವಕಾಶದ ಪ್ರಕಾರ ವಿಚ್ಛೇದಿತ ಮಹಿಳೆಯ ನಿರ್ವಹಣಾ ಭತ್ಯೆಗೆ ಸಂಬಂಧಿಸಿದ್ದಾಗಿದೆ. ಪ್ರಸ್ತುತ ಅವಕಾಶವು ಮಾಸಿಕ ಗರಿಷ್ಠ ರೂ.500/- ಆಗಿರುತ್ತದೆ. 1973ರಲ್ಲಿ ನಿಗದಿಗೊಳಿಸಲ್ಪಟ್ಟಿರುವ ಈ ಮೊತ್ತವನ್ನು ಹೆಚ್ಚಿಸಲು ಶ್ರೀಮತಿ ದೀಪಾ ಜೈನ್ ಸಿಂಗ್ ಸಲಹೆ ಮಾಡಿದ್ದಾರೆ. ಕೆಲವು ರಾಜ್ಯ ಸರ್ಕಾರಗಳು ಈ ಮೊತ್ತವನ್ನು ರೂ.2000/3000ಕ್ಕೆ ಹೆಚ್ಚಿಸುವ ಕ್ರಮ ಕೈಗೊಳ್ಳಲಿವೆ ಎಂಬುದು ತಿಳಿದು ಬಂದಿರುತ್ತದೆ. ಇದರಲ್ಲಿ ಒಳಗೊಂಡಿರುವ ಕ್ರಮಗಳು ರಾಜ್ಯ ಸರ್ಕಾರಗಳು ಕೈಗೊಳ್ಳಲು ಕಷ್ಟಕರವಾದುದರಿಂದ ಶ್ರೀಮತಿ ದೀಪಾ ಜೈನ್ ಸಿಂಗ್ ಅವರು ಅಪರಾಧ ದಂಡ ಸಂಹಿತೆಯಲ್ಲಿ ತಿದ್ದುಪಡಿ ತರುವಂತೆ ಕೇಂದ್ರ ಸರ್ಕಾರ ಕ್ರಮ ಗೈಗೊಳ್ಳುವಂತೆ ಮಾನವ ಹಕ್ಕುಗಳ ಆಯೋಗಕ್ಕೆ ಶಿಫಾರಸು ಮಾಡಬಹುದೆಂದು ಸಲಹೆ ನೀಡಿದ್ದಾರೆ.

2.0 ಈ ಪ್ರಸ್ತಾಪವನ್ನು ದಿನಾಂಕ 1.9.2000ದಂದು ನಡೆದ ತನ್ನ ಸಭೆಯಲ್ಲಿ ಆಯೋಗವು ಪರಿಗಣಿಸಿ. ಆಯೋಗವು ಈ ಸಲಹೆಯ ಬಗ್ಗೆ ಮೆಚ್ಚುಗೆ ವ್ಯಕ್ತ ಪಡಿಸಿದೆ. ನಿರ್ವಹಣಾ ಭತ್ಯೆಯು ಮಾಹೆಯಾನ ಗರಿಷ್ಠ ರೂ.5000/-ಕ್ಕೆ ಏರಿಸುವಂತೆ ಸರ್ಕಾರಕ್ಕೆ ಶಿಫಾರಸು ಮಾಡಲು ನಿರ್ಧರಿಸಿದೆ. ಆದ್ದರಿಂದ

ಆಯೋಗದ ಶಿಫಾರಸನ್ನು ಕಾರ್ಯರೂಪಕ್ಕೆ ತರುವ ಉದ್ದೇಶಿತ ಕೆಲಸವನ್ನು ತಾವು ಕೈಗೆತ್ತಿಕೊಂಡು ಈ ವಿಚಾರಕ್ಕೆ ಸಂಬಂಧಿಸಿದಂತೆ ಕೈಗೊಂಡ ಕ್ರಮದ ಬಗ್ಗೆ ಆಯೋಗಕ್ಕೆ ತಿಳಿಸಬೇಕೆಂದು ವಿನಂತಿಸುತ್ತೇನೆ.

ತಮ್ಮ ವಿಶ್ವಾಸಿ

ಸಹಿ/-

**(ಎನ್. ಗೋಪಾಲ ಸ್ವಾಮಿ)**

ಶ್ರೀ ಬಿ. ಕೆ. ಚತುರ್ವೇದಿ,
ಕಾರ್ಯದರ್ಶಿಗಳು, ಭಾರತ ಸರ್ಕಾರ,
ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಇಲಾಖೆ,
ಶಾಸ್ತ್ರಿ ಭವನ, ನವ ದೆಹಲಿ - 110 001

ಪ್ರತಿ: ಶ್ರೀ ಎ. ಕೆ. ಜೈನ್,
ಜಂಟಿ ಕಾರ್ಯದರ್ಶಿಗಳು, ಭಾರತ ಸರ್ಕಾರ,
ನವ ದೆಹಲಿ.

ಸಹಿ/-

**(ಎನ್.ಗೋಪಾಲ ಸ್ವಾಮಿ)**

ಅಧ್ಯಾಯ VII

# ಮಕ್ಕಳ ಹಕ್ಕುಗಳು

## ಸರಕಾರಿ ನೌಕರರು 14 ವರ್ಷಕ್ಕೆ ಕೆಳಗಿರುವ ಮಕ್ಕಳನ್ನು ಗೃಹ ಕಾರ್ಮಿಕರಾಗಿ ನೇಮಿಸಿಕೊಳ್ಳುವುದರ ಕುರಿತು

ನ್ಯಾಯಮೂರ್ತಿ ಎಂ. ಎನ್. ವೆಂಕಟಾಚಲಯ್ಯ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ
ಅಧ್ಯಕ್ಷರು

ಫೆಬ್ರವರಿ 10, 1997

ಆತ್ಮೀಯ ಸಚಿವರಿಗೆ,

ಮಕ್ಕಳು ಗೃಹ ಕಾರ್ಮಿಕರಾಗಿ ದುಡಿಯುತ್ತಿರುವುದರ ಬಗೆಗೆ ಮತ್ತು ಸುದೀರ್ಘವಾದ ಮತ್ತು ಕಷ್ಟಕರವಾದ ಕೆಲಸಗಳನ್ನು ಮಾಡುತ್ತಿರುವುದರ ಕುರಿತಂತೆ ಅಸಮಾಧಾನಕರವಾದ ವರದಿಗಳು ಆಯೋಗಕ್ಕೆ ಬರುತ್ತಿವೆ. 14 ವರ್ಷ ವಯಸ್ಸಿನ ಕೆಳಗಿನ ಮಕ್ಕಳನ್ನು ಮನೆಕೆಲಸಕ್ಕಾಗಿ ನೇಮಕ ಮಾಡಿಕೊಂಡಿರುವ ಸರಕಾರಿ ನೌಕರರ ವಿರುದ್ಧವೂ ಆಯೋಗಕ್ಕೆ ದೂರುಗಳು ಬಂದಿವೆ. ಇದು ಸುಮ್ಮನೆ ಒಪ್ಪತಕ್ಕಂತಹ ವಿಷಯವಲ್ಲ ಎಂಬುದನ್ನು ನೀವು ಸಹೃದಯತೆಯಿಂದ ಸಮ್ಮತಿಸುವಿರಿ.

14 ವರ್ಷಕ್ಕೆ ಕೆಳಗಿನ ಮಕ್ಕಳನ್ನು ಸರ್ಕಾರಿ ನೌಕರರು ಕೆಲಸಕ್ಕೆ ನೇಮಿಸಿಕೊಳ್ಳುವುದು ಇತರರು ನೇಮಿಸಿಕೊಳ್ಳುವುದಕ್ಕಿಂತಲೂ ಹೆಚ್ಚು ದೂಷಣೀಯವಾದುದು ಎಂದು ಆಯೋಗ ಭಾವಿಸುತ್ತದೆ. 1997ರ ಜನವರಿ 10ರಂದು ನಡೆದ ಆಯೋಗದ ಸಭೆಯಲ್ಲಿ ಸರ್ಕಾರಿ ನೌಕರರ (ರಾಜ್ಯ ಮತ್ತು ಕೇಂದ್ರ) ನಡವಳಿಕೆಯ ನಿಯಮಾವಳಿಗಳಲ್ಲಿ ಸೂಕ್ತವಾದ ನಿಯಮವೊಂದರ ಸೇರ್ಪಡೆಗೊಳಿಸಬೇಕೆಂದು ಆಯೋಗ ನಿರ್ಧರಿಸಿದೆ. ಇತರ ಪ್ರಕಾರ ಅಂತಹ ನೇಮಕವು ನಿಷೇಧಿಸಲ್ಪಡುವುದರಿಂದ ನೇಮಕ ಮಾಡಿಕೊಳ್ಳುವ ಸರ್ಕಾರಿ ನೌಕರರು ದೊಡ್ಡ ಮೊತ್ತದ ಜುಲ್ಮಾನೆ ತೆರಬೇಕಾದಂತಹ ತಪ್ಪು ನಡವಳಿಕೆಯಾಗುತ್ತದೆ.

ಆದ್ದರಿಂದ, ಕೇಂದ್ರ ನಾಗರಿಕ ಸೇವಾ (ನಡವಳಿಕೆ) ನಿಯಮ 1964ರಲ್ಲಿ ಈ ಕೆಳಗೆ ಹೇಳಿರುವಂತೆ ಒಂದು ನಿಯಮವನ್ನು ಸೇರಿಸಲು ಸೂಕ್ತ ಕ್ರಮ ಕೈಗೊಳ್ಳಬೇಕೆಂದು ತಮ್ಮಲ್ಲಿ ವಿನಂತಿಸಿಕೊಳ್ಳುತ್ತೇನೆ:-

"ಕೇಂದ್ರ ನಾಗರಿಕ ಸೇವಾ (ನಡವಳಿಕೆ) ನಿಯಮ 1964 ಈ ಕೆಳಗೆ ಕೊಟ್ಟಿರುವ ನಿಯಮ 22-ಎ ಪ್ರಕಾರ ತಿದ್ದುಪಡಿಯಾಗುತ್ತದೆ:-

i) 14ವರ್ಷಕ್ಕೆ ಕೆಳಗಿನ ಮಗುವನ್ನು ಯಾವ ಸರಕಾರಿ ನೌಕರನೂ ಕೆಲಸಕ್ಕೆ ನೇಮಿಸಿಕೊಳ್ಳಕೂಡದು;

ii) ಉಪ ನಿಯಮ (i)ರ ಉಲ್ಲಂಘನೆಯು ದೊಡ್ಡ ಮೊತ್ತದ ಜುಲ್ಮಾನೆ ವಿಧಿಸಲ್ಪಡುವಂತಹ ತಪ್ಪು ನಡವಳಿಕೆಯಾಗಿರುತ್ತದೆ".

ಎಲ್ಲ ರಾಜ್ಯಗಳ ಮುಖ್ಯ ಮಂತ್ರಿಗಳಿಗೆ ಪ್ರತ್ಯೇಕವಾದ ಪತ್ರವೊಂದನ್ನು ಬರೆಯುವುದರ ಮೂಲಕ ಇಂತಹುದೇ ಒಂದು ನಿಯಮವು ರಾಜ್ಯ ಸರ್ಕಾರಿ ನೌಕರರಿಗೂ ಅನ್ವಯಿಸುವಂತೆ ಕೋರುತ್ತೇನೆ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ, ಸಹಿ/-

(ಎಮ್. ಎನ್. ವೆಂಕಟಾಚಲಯ್ಯ)

ಶ್ರೀ ಎಸ್. ಆರ್. ಬಾಲಸುಬ್ರಹ್ಮಣ್ಯಂ ರಾಜ್ಯ ಸಚಿವರು,
ನೌಕರರು, ಸಾರ್ವಜನಿಕ ಕುಂದು ಕೊರತೆಗಳು ಮತ್ತು ನಿವೃತ್ತಿ ವೇತನ ಖಾತೆ,
ಉತ್ತರ ಬ್ಲಾಕ್, ನವದೆಹಲಿ.

# 14 ವರ್ಷಕ್ಕೆ ಕೆಳಗಿನ ಮಕ್ಕಳನ್ನು ಮನೆ ಕೆಲಸಕ್ಕಾಗಿ ನೇಮಿಸಿಕೊಳ್ಳುವುದನ್ನು ನಿಷೇಧಿಸುವಂತೆ ಸರ್ಕಾರಿ ನೌಕರರ ನಡವಳಿಕೆ ನಿಯಮದಲ್ಲಿ ತಿದ್ದುಪಡಿ ಮಾಡುವುದಕ್ಕೆ ಎಲ್ಲ ರಾಜ್ಯಗಳ ಮುಖ್ಯ ಮಂತ್ರಿಗಳಿಗೆ ಬರೆಯಲಾಗಿರುವ ಪತ್ರ

ನ್ಯಾಯಮೂರ್ತಿ ಎಂ. ಎನ್. ವೆಂಕಟಾಚಲಯ್ಯ　　　　ಸಂ.8/11/97-ಅಧ್ಯಯನ

ಅಧ್ಯಕ್ಷರು　　　　ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ್ಯ

**ಮಾರ್ಚ್ 3, 1997**

ಆತ್ಮೀಯರಾದ ಮುಖ್ಯ ಮಂತ್ರಿಗಳಿಗೆ,

14 ವರ್ಷ ವಯಸ್ಸಿನ ಕೆಳಗಿರುವ ಮಕ್ಕಳು ಗೃಹ ಕಾರ್ಮಿಕರಾಗಿ ಸರ್ಕಾರಿ ನೌಕರರ ಮನೆಗಳಲ್ಲಿ ದುಡಿಯುತ್ತಿದ್ದು, ಹೆಚ್ಚು ಸಮಯ ಹಿಡಿಯುವ ಹಾಗೂ ಕಷ್ಟಕರವಾದ ಕೆಲಸಗಳನ್ನು ಮಾಡುತ್ತಿರುವುದಾಗಿ ಮತ್ತು ಕೆಲವೊಮ್ಮೆ ದೌರ್ಜನ್ಯಗಳಿಗೆ ಒಳಗಾಗುತ್ತಿರುವುದಾಗಿ ಆಯೋಗಕ್ಕೆ ವರದಿಗಳು ಬರುತ್ತಿವೆ. ಇದು ಸುಮ್ಮನೆ ಒಪ್ಪಿಕೊಳ್ಳತಕ್ಕಂತಹ ಒಂದು ವಿಷಯವಲ್ಲ ಎಂಬುದನ್ನು ನೀವು ಸಹೃದಯತೆಯಿಂದ ಸಮ್ಮತಿಸುವಿರಿ.

"14 ವರ್ಷದವರೆಗಿನ ಎಲ್ಲಾ ಮಕ್ಕಳಿಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣ ಪಡೆಯುವ ಹಕ್ಕು ಇದೆ" ಅದು ಮೂಲಭೂತ ಹಕ್ಕು ಎಂದು ಸರ್ವೋಚ್ಚ ನ್ಯಾಯಾಲಯವು ಬಣ್ಣಿಸಿ ಎತ್ತಿ ಹಿಡಿದಿರುವಂತಹ ಇತ್ತೀಚಿನ ತೀರ್ಪಿನ ಹಿನ್ನೆಲೆಯಲ್ಲಿ, ಮಕ್ಕಳನ್ನು ಮನೆ ಕೆಲಸಕ್ಕಾಗಿ ನೇಮಿಸುವ ರೀತಿ ಈ ತೀರ್ಪಿನ ಆಶಯಗಳಿಗೆ ವಿರುದ್ಧವಾದುದೆಂಬುದನ್ನು ನೀವು ಒಪ್ಪಬಹುದು.

14 ವರ್ಷಕ್ಕೆ ಕೆಳಗಿನ ಮಕ್ಕಳನ್ನು ಸರ್ಕಾರಿ ನೌಕರರು ಕೆಲಸಕ್ಕೆ ನೇಮಿಸಿಕೊಳ್ಳುವುದು ಇತರರು ನೇಮಿಸಿಕೊಳ್ಳುವುದಕ್ಕಿಂತಲೂ ಹೆಚ್ಚು ದೂಷಣೀಯವಾದುದು ಎಂದು ಆಯೋಗ ಭಾವಿಸುತ್ತದೆ. 1997ರ ಜನವರಿ 10ರಂದು ನಡೆದ ಆಯೋಗದ ಸಭೆಯಲ್ಲಿ ಸರ್ಕಾರಿ ನೌಕರರ (ರಾಜ್ಯ ಮತ್ತು ಕೇಂದ್ರ) ನಡವಳಿಕೆಯ ನಿಯಮಾವಳಿಗಳಲ್ಲಿ ಸೂಕ್ತವಾದ ನಿಯಮವೊಂದರ ಸೇರ್ಪಡೆಗೊಳಿಸಬೇಕೆಂದು ಆಯೋಗ ನಿರ್ಧರಿಸಿದೆ. ಇತರ ಪ್ರಕಾರ ಅಂತಹ ನೇಮಕವು ನಿಷೇಧಿಸಲ್ಪಡುವುದರಿಂದ ನೇಮಕ ಮಾಡಿಕೊಳ್ಳುವ ಸರ್ಕಾರಿ ನೌಕರರದು ದೊಡ್ಡ ಮೊತ್ತದ ಜುಲ್ಮಾನೆ ತೆರಬೇಕಾದಂತಹ ತಪ್ಪು ನಡವಳಿಕೆಯಾಗುತ್ತದೆ. ಅದರಂತೆ, ಉಸ್ತುವಾರಿ ಸಚಿವರು, ಸಾರ್ವಜನಿಕ ಕುಂದುಕೊರತೆಗಳು ಮತ್ತು ನಿವೃತ್ತಿ ವೇತನ ಖಾತೆ, ಭಾರತ ಸರ್ಕಾರ ಇವರಿಗೆ ನಾನು ಪತ್ರವೊಂದನ್ನು ಬರೆದು ಕೇಂದ್ರ ನಾಗರಿಕ ಸೇವಾ (ನಡವಳಿಕೆ ) ನಿಯಮ, 1964ರಲ್ಲಿ (ನಿಯಮ 22-ಎ)ಯನ್ನು ಈ ಕೆಳಗಿನಂತೆ ಸೇರಿಸಬೇಕೆಂದು ಕೋರಿದ್ದೇನೆ:

"ಕೇಂದ್ರ ನಾಗರಿಕ ಸೇವಾ (ನಡವಳಿಕೆ) ನಿಯಮ 1964 ಈ ಕೆಳಗೆ ಕೊಟ್ಟಿರುವ ನಿಯಮ 22-ಎ ಪ್ರಕಾರ ತಿದ್ದುಪಡಿಯಾಗುತ್ತದೆ:-

i) 14ವರ್ಷಕ್ಕೆ ಕೆಳಗಿನ ಮಗುವನ್ನು ಯಾವ ಸರಕಾರಿ ನೌಕರನೂ ಕೆಲಸಕ್ಕೆ ನೇಮಿಸಿಕೊಳ್ಳಕೂಡದು;

ii) ಉಪ ನಿಯಮ (i)ರ ಉಲ್ಲಂಘನೆಯು ದೊಡ್ಡ ಮೊತ್ತದ ಜುಲ್ಮಾನೆ ವಿಧಿಸಲ್ಪಡುವಂತಹ ತಪ್ಪು ನಡವಳಿಕೆಯಾಗಿರುತ್ತದೆ".

ರಾಜ್ಯ ಸರ್ಕಾರಿ ನೌಕರರ ನಡವಳಿಕೆ ನಿಯಮಗಳಲ್ಲಿ ಇದೇ ರೀತಿಯ ಒಂದು ನಿಯಮವನ್ನು ಸೇರಿಸಬೇಕೆಂದು ನಮ್ಮಲ್ಲಿ ವಿನಂತಿಸುತ್ತೇನೆ. ಈ ವಿಚಾರದಲ್ಲಿ ತಾವು ಈ ಕೂಡಲೇ ಕ್ರಮ ಕೈಗೊಂಡಲ್ಲಿ ನಾನು ಆಭಾರಿಯಾಗಿದ್ದೇನೆ.

ಕೃತಜ್ಞತೆಗಳೊಂದಿಗೆ,

ತಮ್ಮ ವಿಶ್ವಾಸಿ,
ಸಹಿ/-
(ಎಂ. ಎನ್. ವೆಂಕಟಾಚಲಯ್ಯ)

ರವರಿಗೆ

ಎಲ್ಲ ರಾಜ್ಯ ಮುಖ್ಯ ಮಂತ್ರಿಗಳಿಗೆ ಹಾಗೂ ಕೇಂದ್ರ ಶಾಸಿತ ಪ್ರದೇಶಗಳ ಆಡಳಿತಾಧಿಕಾರಿಗಳಿಗೆ

ಅಧ್ಯಾಯ VIII

# ಮಲ ಹೋರುವ ಪದ್ಧತಿಯ ನಿರ್ಮೂಲನೆ

## ಮಲ ಹೊರುವುದನ್ನು ನಿರ್ಮೂಲನೆ ಮಾಡುವಂತೆ ವಿವಿಧ ಅಧಿಕಾರಿಗಳಿಗೆ ಬರೆಯ ಪತ್ರ

ನ್ಯಾಯಮೂರ್ತಿ ರಂಗನಾಥ ಮಿಶ್ರಾ                ಡಿ.ಓ.ಸಂ.15 (19)/ 96 - ಸಿಒಒಆರ್‌ಡಿ.

ಅಧ್ಯಕ್ಷರು                ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ

ಅಕ್ಟೋಬರ್ 23, 1996

ಆತ್ಮೀಯರಾದ ಸಚಿವರಿಗೆ,

ಮಾನವ ಹಕ್ಕುಗಳ ಸಂರಕ್ಷಣೆಗಾಗಿ ಸಂವಿಧಾನ ಅಥವಾ ಪ್ರಸ್ತುತ ಜಾರಿಯಲ್ಲಿರುವ ಕಾನೂನುಗಳ ಮೂಲಕ ನೀಡಲಾಗಿರುವ ಸುರಕ್ಷೆಯ ಅವಕಾಶಗಳನ್ನು ಪುನರಾವಲೋಕಿಸಲು ಹಾಗೂ ಅದರ ಪರಿಣಾಮಕಾರಿ ಜಾರಿಗೆ ಅಗತ್ಯವಾದ ಕ್ರಮಗಳನ್ನು ಶಿಫಾರಸು ಮಾಡಲು ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗಕ್ಕೆ ಸಂವಿಧಾನಬದ್ಧವಾದ ಜವಾಬ್ದಾರಿ ಇದೆ; ಮಾನವ ಹಕ್ಕುಗಳನ್ನು ಅನುಭವಿಸಲು ಅಡ್ಡಿಯಾಗುವಂತಹ ಅಂಶಗಳನ್ನು ಪರಿಶೀಲಿಸುವುದು ಹಾಗೂ ಮಾನವ ಹಕ್ಕುಗಳ ರಕ್ಷಣೆ ಕಾಯ್ದೆ, 1993ರ ಪರಿಚ್ಛೇದ 12(d) ಮತ್ತು (e) ಪ್ರಕಾರ ಸೂಕ್ತವಾದ ಪರಿಹಾರ ಕ್ರಮಗಳನ್ನು ಶಿಫಾರಸು ಮಾಡುವುದು.

2 ದೇಶದ ಹಲವು ಭಾಗಗಲ್ಲಿ ಈಗಲೂ ಜಾರಿಯಲ್ಲಿರುವ ಅಮಾನವೀಯವಾದ ಮತ್ತು ಹೀನವಾದ ಮಲ ಹೊರುವ ಪದ್ಧತಿಯ ಬಗೆಗೆ ಆಯೋಗ ತೀವ್ರ ಕಳವಳ ವ್ಯಕ್ತಪಡಿಸಿದೆ. ಆಯೋಗ ಇದನ್ನು ಮಾನವ ಘನತೆಗೆ ಮಾಡುವ ಅವಮಾನ ಮತ್ತು ದೊಡ್ಡ ಸಾಮಾಜಿಕ ಕಳಂಕ ಎಂದು ಭಾವಿಸುತ್ತದೆ. ಮಲ ಹೊರುವವರಿಗೂ ಅವರ ಆಶ್ರಿತರಿಗೂ ಅದರಿಂದ ವಿಮುಕ್ತಿ ಮತ್ತು ಪುನರ್ವಸತಿ ಕಲ್ಪಿಸುವಂತಹ ರಾಷ್ಟ್ರೀಯ ಯೋಜನೆ 1992 ಮಾರ್ಚ್‌ನಲ್ಲಿ ಶುರುವಾದರೂ ಕೆಲವು ರಾಜ್ಯಗಳನ್ನು ಬಿಟ್ಟುಹೆ ಇದರ ಜಾರಿ ಬಹಳ ನಿರಾಶಾದಾಯಕವಾಗಿದೆಯೆಂದು ಆಯೋಗ ಅಭಿಪ್ರಾಯಪಟ್ಟಿದೆ. ಬಹುತೇಕ ರಾಜ್ಯಗಳಲ್ಲಿ, ಫಲಾನುಭವಿಗಳನ್ನು ಗುರುತಿಸುವ ಸಮೀಕ್ಷೆಗಳು ಇನ್ನೂ ಪೂರ್ಣಗೊಂಡಿಲ್ಲ. ಸಮೀಕ್ಷೆ ನಡೆದ ಜಾಗಗಳಲ್ಲಿ ಕೆಲವು ಪ್ರದೇಶಗಳು ಮತ್ತು ಕುಟುಂಬಗಳನ್ನು ಬಿಟ್ಟುಬಿಡಲಾಗಿದೆ ಎಂಬ ಆಪಾದನೆಗಳಿವೆ. ಅಲ್ಲದೆ, ಬಹುತೇಕ ರಾಜ್ಯಗಳು ತರಬೇತಿ ಮತ್ತು ಪುನರ್ವಸತಿಗಾಗಿ ರೂಪಿಸಿದ ಗುರಿಯನ್ನು ಮುಟ್ಟುವುದರಲ್ಲಿ ವಿಫಲವಾಗಿದೆ ಎಂದು ಹೇಳಲು ನೋವಾಗುತ್ತದೆ.

3. ಈಗ ಮಾಡಲಾಗುತ್ತಿರುವ ಕೆಲಸವು ಒಂದು ಗುರಿಯತ್ತ ಕೇಂದ್ರೀಕರಿಸುವಂತೆ ಮಾಡಲು ಹಾಗೂ ಸರ್ಕಾರೇತರ ಸಂಸ್ಥೆಗಳು ಮತ್ತು ಇತರೆ ಸಂಘಟನೆಗಳನ್ನು ಪ್ರೇರೇಪಣೆ ಮಾಡುವುದರ ಮೂಲಕ ಜೊತೆಗೆ ಸೇರಿಸಿಕೊಳ್ಳುವ ಉದ್ದೇಶದಿಂದ 1996ನೇ ಸೆಪ್ಟೆಂಬರ್ 23ರಂದು ಆಯೋಗದ ಕಛೇರಿಯಲ್ಲಿ ಒಂದು ಸಭೆ ನಡೆಸಲಾಯಿತು. ಇದರಲ್ಲಿ, ಕಲ್ಯಾಣ ಸಚಿವಾಲಯಗಳು, ನಗರ

ವ್ಯವಹಾರ ಮತ್ತು ಉದ್ಯೋಗ ಸಚಿವಾಲಯ, ಸಫಾಯಿ ಕರ್ಮಚಾರಿಗಳ ರಾಷ್ಟ್ರೀಯ ಆಯೋಗ, ಹುಡ್ಕೋ ಇವುಗಳ ಹಿರಿಯ ಅಧಿಕಾರಿಗಳು ಹಾಗೂ ಸುಲಭ್ ಇಂಟರ್‌ನ್ಯಾಷನಲ್‌ನ ಸ್ಥಾಪಕರು ಮತ್ತು ಇತರ ವಿಭಾಗಗಳ ಅಧ್ಯಕ್ಷರುಗಳು ಸಭೆಯಲ್ಲಿ ಹಾಜರಿದ್ದರು.

4. ಆಯೋಗವು ಕೈಗೆತ್ತಿಕೊಂಡಿರುವ ಕಾರ್ಯವನ್ನು ಮೇಲೆ ಹೇಳಿದ ಸಭೆಯಲ್ಲಿ ಹಾಜರಿದ್ದ ಸದಸ್ಯರು ಸ್ವಾಗತಿಸಿದರು. ಮಲ ಹೊರುವ ಸಮಸ್ಯೆ ಮಾನವ ಹಕ್ಕುಗಳಿಗೆ ಸಂಬಂಧಿಸಿದ ಒಂದು ಸಂಗತಿಯಾಗಿರುತ್ತದೆ. ಅದಕ್ಕೆ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳನ್ನು ಸೇರಿಸಿ ನಡೆಸಲಾಗುವ ಸಂಯೋಜಿತ ಪ್ರಯತ್ನಗಳ ಅಗತ್ಯತೆಯಿದೆ ಎನ್ನುವುದು ಈ ಸಭೆಯಲ್ಲಿ ವ್ಯಕ್ತವಾದ ಒಮ್ಮತದ ಅಭಿಪ್ರಾಯವಾಗಿತ್ತು. ಸದಸ್ಯರಿಗೆ ಅನಿಸಿದ ಮತ್ತೊಂದು ವಿಚಾರವೆಂದರೆ, ಸರ್ಕಾರಗಳು ತಮ್ಮ ಕಟ್ಟಡಗಳಿಂದ ಮಲ ಹೊರುವುದನ್ನು ಸಂಪೂರ್ಣವಾಗಿ ನಿರ್ಮೂಲನೆ ಮಾಡಿ ಮೊದಲನೆಯ ಮಾದರಿಯನ್ನು ತೋರಬೇಕು. ಇದಕ್ಕನುಗುಣವಾಗಿ, ಒಣ ಶೌಚಾಲಯಗಳ ಜಾಗದಲ್ಲಿ ನೀರು ಹರಿಸಿ ಶುಚಿಗೊಳಿಸುವಂತಹ ಶೌಚಾಲಯಗಳನ್ನು ತನ್ನ ಕಟ್ಟಡಗಳಲ್ಲಿ ಆದಷ್ಟು ಮಟ್ಟಿಗೆ ನಿರ್ಮಾಣ ಮಾಡುವಂತೆ ಎಲ್ಲ ರಾಜ್ಯ ಸರ್ಕಾರಗಳಿಗೆ ಹಾಗೂ ಕೆಲವು ಕೇಂದ್ರ ಸಚಿವಾಲಯಗಳಿಗೆ ಪತ್ರಗಳನ್ನು ಬರೆಯಬೇಕೆಂದು ಅವರು ಆಯೋಗಕ್ಕೆ ಮನವಿ ಮಾಡಿದರು. ಇದರಿಂದ ಜನಮನದಲ್ಲಿ ಸಾಕಷ್ಟು ಪರಿಣಾವುಂಟಾಗುತ್ತದೆ ಹಾಗೂ ಜಾಗೃತಿ ಹೆಚ್ಚಾಗುತ್ತದೆ ಎಂಬ ಅಭಿಪ್ರಾಯಗಳೂ ವ್ಯಕ್ತವಾದವು.

5. ಅವರೊಂದಿಗೆ ಆಯೋಗಕ್ಕೆ ಸಂಪೂರ್ಣ ಸಮ್ಮತಿ ಇದೆ ಹಾಗೂ ತತ್‌ಕ್ಷಣದ ಕ್ರಮಕ್ಕಾಗಿ ಸಂಬಂಧಪಟ್ಟವರಿಗೆ ಎಲ್ಲಾ ನಿರ್ದೇಶನಗಳನ್ನು ಕೊಡಬೇಕೆಂದು ಈ ಸಂದರ್ಭದಲ್ಲಿ ಕೋರುತ್ತೇನೆ. ಇದರಲ್ಲಿ, ಘನತೆಯೊಂದಿಗೆ ಬದುಕುವ ಹಕ್ಕಿನ ವಿಚಾರ ಒಳಗೊಂಡಿರುವುದರಿಂದ, ಈ ಕ್ರಮದ ಜಾರಿಗೆ ಒಂದು ಶಿಸ್ತಾದ ಸಮಯದ ಚೌಕಟ್ಟನ್ನು ಇರಿಸಿಕೊಳ್ಳುವಂತೆ ತಮ್ಮಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ.

6. ನಮ್ಮ ದೇಶ ಸ್ವಾತಂತ್ರ್ಯದ 50ನೇ ವಾರ್ಷಿಕೋತ್ಸವವನ್ನು ಆಚರಿಸುತ್ತಿದೆ. ಸ್ವಾತಂತ್ರ್ಯಾನಂತರ ಐದು ದಶಕಗಳು ಕಳೆದರೂ ಸಾವಿರಾರು ಮಲ ಹೊರುವ ಕುಟುಂಬಗಳು ಇನ್ನೂ ಸಾಮಾಜಿಕವಾಗಿ ಹೀನವಾದ ಬದುಕನ್ನು ನಡೆಸುತ್ತಿದ್ದಾರೆ ಎನ್ನುವುದು ನಿಜವಾಗಿಯೂ ನಾಚಿಕೆ ಗೇಡಿನ ಸಂಗತಿಯಾಗಿದೆ. ಸಮಾಜದ ಈ ಜನ ವಿಭಾಗದ ಕೆಲಸದ ಮತ್ತು ಬದುಕಿನ ಸ್ಥಿತಿಗತಿಯನ್ನು ಅಭಿವೃದ್ಧಿಪಡಿಸುವುದು ಹಾಗೂ ಅವರ ಮಾನವ ಘನತೆಯನ್ನು ಅವರ ಕೈಗೆ ಮತ್ತೆ ಕೊಡುವುದಕ್ಕಾಗಿ ನಮ್ಮರಾಷ್ಟ್ರ ಪಿತ ಮಹಾತ್ಮಾ ಗಾಂಧಿ ತಮ್ಮ ಇಡೀ ಬದುಕನ್ನು ಅದಕ್ಕಾಗಿ ಮೀಸಲಾಗಿಟ್ಟಿದ್ದರು. ಮಲ ಹೋರುವ ಈ ಪರಂಪರಾಗತ ಪದ್ಧತಿ ನಿಲ್ಲಬೇಕು.

7. ಮಲ ಹೊರುವವರ ನೇಮಕಾತಿ ಮತ್ತು ಒಣ ಶೌಚಾಲಯ ನಿರ್ಮಾಣ(ನಿಷೇಧ) ಕಾಯ್ದೆ, 1993 ಮಲ ಹೊರುವವರ ನೇಮಕಾತಿಯನ್ನು ಮತ್ತು ಒಣ ಶೌಚಾಲಯಗಳ ನಿರ್ಮಾಣವನ್ನು ನಿಷೇಧಿಸುತ್ತದೆ. ಸಂಸತ್ತಿನ ಈ ಮಹತ್ವಪೂರ್ಣವಾದ ಶಾಸನವನ್ನು ರಚನಾತ್ಮಕವಾಗಿ ಜಾರಿಗೆ ತರಬೇಕು. ಸಂವಿಧಾನದ ಹಲವು ಅವಕಾಶಗಳು ಮತ್ತು ಮೇಲೆ ಪ್ರಸ್ತಾಪಿಸಲಾಗಿರುವ ಕಾಯ್ದೆ ಹಾಗೂ ಮಾನವ ಹಕ್ಕುಗಳ ರಕ್ಷಣೆಯನ್ನು ದೃಷ್ಟಿಯಲ್ಲಿರಿಸಿಕೊಂಡು, ತಮ್ಮ ಸಚಿವಾಲಯದ

ನಿಯಂತ್ರಣದಲ್ಲಿರುವ ಕಟ್ಟಡಗಳಲ್ಲಿ ಒಣ ಶೌಚಾಲಯಗಳನ್ನು ತೆಗೆದು ಹಾಕಿ ನೀರು ಹರಿಸಿ ಶುಚಿಗೊಳಿಸುವಂತಹ ಶೌಚಾಲಯಗಳನ್ನು ನಿರ್ಮಿಸಿ ಒಂದು ಮಾದರಿಯನ್ನು ಸ್ಥಾಪಿಸಬೇಕೆಂದು ಹಾಗೂ ಈ ಗುರಿಯನ್ನು ಸಾಧಿಸುವುದಕ್ಕಾಗಿ ದಿನಾಂಕವೊಂದನ್ನು ನಿಗದಿಪಡಿಸಿಕೊಳ್ಳಬೇಕೆಂದು ತಮ್ಮನ್ನು ಕೋರುತ್ತೇನೆ.

8. ತಮ್ಮ ಪ್ರತಿಕ್ರಿಯೆಯ ನಿರೀಕ್ಷೆಯಲ್ಲಿ.

ಕೃತಜ್ಞತೆಗಳೊಂದಿಗೆ,

ತಮ್ಮ ವಿಶ್ವಾಸಿ,
ಸಹಿ/-
(ರಂಗನಾಥ್ ಮಿಶ್ರಾ)

1. ಡಾ. ಯು. ವೆಂಕಟೇಸ್ವರುಲು,
   ನಗರ ವ್ಯವಹಾರ ಮತ್ತು ಉದ್ಯೋಗ ಸಚಿವರು,
   ನಿರ್ಮಾಣ್ ಭವನ, ನವ ದೆಹಲಿ.
2. ಶ್ರೀ ಮುಲಾಯಂ ಸಿಂಗ್ ಯಾದವ್,
   ರಕ್ಷಣಾ ಸಚಿವರು.
3. ಶ್ರೀ ರಾಮ್‌ಕ ವಿಲಾಸ್ ಪಾಸ್ವಾನ್,
   ರೇಲ್ವೆ ಸಚಿವರು
4. ಶ್ರೀ ಎಸ್. ಆರ್. ಬೊಮ್ಮಾಯಿ,
   ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯ
5. ಎಲ್ಲ ರಾಜ್ಯಗಳ ಮುಖ್ಯ ಮಂತ್ರಿಗಳು

# ಮಲ ಹೊರುವವರ ನೇಮಕಾತಿ ಮತ್ತು ಒಣ ಶೌಚಾಲಯ ನಿರ್ಮಾಣ (ನಿಷೇಧ) ಕಾನೂನು, 1993ನ್ನು ಅಂಗೀಕಾರ ಮಾಡುವಂತೆ ಕೋರಿ ಎಲ್ಲ ಮುಖ್ಯ ಮಂತ್ರಿಗಳಿಗೆ ಬರೆಯಲಾಗಿರುವ ಪತ್ರ

**ನ್ಯಾಯಮೂರ್ತಿ ಎಂ. ಎನ್. ವೆಂಕಟಾಚಲಯ್ಯ** ಡಿ.ಓ.ಸಂ.11/1/99-ಪಿಆರ್‌ಪಿ ಮತ್ತು ಪಿ
ಅಧ್ಯಕ್ಷರು **ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ**

24ನೇ ಜನವರಿ 1997

ಆತ್ಮೀಯರಾದ ಮುಖ್ಯ ಮಂತ್ರಿಗಳಿಗೆ,

ಮಲ ಹೊರುವ ಪದ್ಧತಿಯನ್ನು ನಿಮೂಲನೆಗೊಳಿಸುವುದರ ಕುರಿತು ಜಸ್ಟಿಸ್ ಶ್ರೀ ರಂಗನಾಥ ಮಿಶ್ರಾ ಅವರು ದಿನಾಂಕ 23ನೇ ಅಕ್ಟೋಬರ್ 1996ರಂದು ಬರೆದ ಆಯೋಗದ ಹಿಂದಿನ ಪತ್ರದ ಬಗೆಗೆ ತಮ್ಮ ಗಮನ ಸೆಳೆಯಲು ಬಯಸುತ್ತೇನೆ.

ಮಲ ಹೊರುವವರ ನೇಮಕಾತಿ ಮತ್ತು ಒಣ ಶೌಚಾಲಯಗಳ ನಿರ್ಮಾಣ (ನಿಷೇಧ) ಕಾಯ್ದೆ, 1993 ಸಂಸತ್ತಿನಲ್ಲಿ 5ನೇ ಜೂನ್ 1993ರಂದು ಅಂಗೀಕೃತವಾಯಿತು. ಇತರ ವಿಷಯಗಳೊಂದಿಗೆ, ಈ ಕಾಯ್ದೆಯು ಯಾವ ವ್ಯಕ್ತಿಯೂ ಮಾನವನ ಮಲವನ್ನು ಹೊರಬಾರದು ಅಥವಾ ಮಲವನ್ನು ದೈಹಿಕವಾಗಿ ಹೊತ್ತೊಯ್ಯುವುದಕ್ಕಾಗಿ ನೇಮಕಗೊಳ್ಳಬಾರದು ಎಂದು ಹಾಗೂ ಒಣ ಶೌಚಾಲಯಗಳನ್ನು ನಿರ್ಮಾಣ ಮತ್ತು ನಿರ್ವಹಣೆ ಮಾಡಕೂಡದು ಎಂದು ಹೇಳುತ್ತದೆ. ಈ ನಿಷೇಧವನ್ನು ಉಲ್ಲಂಘಿಸುವುದು ಶಿಕ್ಷಾರ್ಹ.

ಈ ಕಾಯ್ದೆ ಜಾರಿಗೊಂಡು ಸುಮಾರು ಮೂರೂವರೆ ವರ್ಷಗಳೇ ಕಳೆದು ಹೋದವು. ತಮ್ಮ ರಾಜ್ಯದಲ್ಲಿ ಮಾನವ ಘನತೆಯನ್ನು ಎತ್ತಿ ಹಿಡಿಯಬಲ್ಲ ಕೇಂದ್ರದ ಈ ಶಾಸನವನ್ನು ಜಾರಿಗೊಳಿಸುವಂತೆ ತಮ್ಮನ್ನು ಕೋರಿ ನಗರ ವ್ಯವಹಾರಗಳು ಮತ್ತು ಉದ್ಯೋಗ ಸಚಿವಾಲಯ ಹಾಗೂ ಸಫಾಯಿ ಕರ್ಮಚಾರಿಗಳ ರಾಷ್ಟ್ರೀಯ ಆಯೋಗ ತಮಗೆ ಹಲವು ಬಾರಿ ಪತ್ರ ಬರೆದು ಕೇಳಿಕೊಂಡಿರುವುದು ನಮ್ಮ ಆಯೋಗದ ಗಮನಕ್ಕೆ ಬಂದಿದೆ.

ಆದ್ದರಿಂದ, ರಾಜ್ಯದ ಶಾಸನ ಸಭೆಯಲ್ಲಿ ಸೂಕ್ತ ನಿರ್ಣಯವೊಂದನ್ನು ಅಂಗೀಕರಿಸಿ ಈ ಮಲ ಹೊರುವವರ ನೇಮಕಾತಿ ಮತ್ತು ಒಣ ಶೌಚಾಲಯಗಳ ನಿರ್ಮಾಣ (ನಿಷೇಧ) ಕಾಯ್ದೆ, 1993ನ್ನು ತಮ್ಮ ರಾಜ್ಯಕ್ಕೆ ಅನ್ವಯಿಸುವ ರೀತಿಯಲ್ಲಿ ಜಾರಿಗೊಳಿಸುವ ನಿಟ್ಟಿನಲ್ಲಿ ಅಗತ್ಯ ಕ್ರಮಗಳನ್ನು ಕೈಗೊಳ್ಳುವಂತೆ ತಮ್ಮನ್ನು ಕೋರುತ್ತೇನೆ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ,
ಸಹಿ/-
**(ಎಂ. ಎನ್. ವೆಂಕಟಾಚಲಯ್ಯ)**

ರವರಿಗೆ,
ಎಲ್ಲ ರಾಜ್ಯಗಳ ಮುಖ್ಯ ಮಂತ್ರಿಗಳು.

## ಸಿಕ್ರಂ ಧ್ಯೇಯೋದ್ದೇಶಗಳು

೧. ವಿದ್ಯಾರ್ಥಿಗಳು, ಕಾರ್ಯಕರ್ತರು, ಶಿಕ್ಷಕರು, ಸರ್ಕಾರಿ ಅಧಿಕಾರಿಗಳು ಹಾಗೂ ಸ್ವಯಂ ಸೇವಾ ಸಂಸ್ಥೆಗಳ ಕಾರ್ಯಕರ್ತರಿಗೆ ಮತ್ತು ಸಾರ್ವಜನಿಕರಿಗೆ ಮಾನವ ಹಕ್ಕುಗಳ ಶಿಕ್ಷಣ.

೨. ದಕ್ಷಿಣ ಭಾರತದಲ್ಲಿ ಮಾನವ ಹಕ್ಕುಗಳ ಪರಿಸ್ಥಿತಿಯನ್ನು ನಿರಂತರವಾಗಿ ಗಮನಿಸಿ, ದಾಖಲಿಸುವುದು.

೩. ಮಾನವ ಹಕ್ಕುಗಳ ಉಲ್ಲಂಘನೆಯಿಂದ ನೊಂದವರ ಪರವಾಗಿ ವಕಾಲತ್ತು ನಡೆಸಿ. ಅವರಿಗೆ ನ್ಯಾಯ ದೊರಕಿಸಿಕೊಡುವುದು.

೪. ಮಾನವ ಹಕ್ಕುಗಳ ಕುರಿತು ಪ್ರಾದೇಶಿಕ, ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಕಾರ್ಯನೀತಿಗಳಿಗಾಗಿ ಪ್ರಚಾರಾಂದೋಳನ ನಡೆಸುವುದು.

೫. ಮಾನವ ಹಕ್ಕುಗಳ ಕಾನೂನುಗಳನ್ನು ಸುಧಾರಿಸಲು ಹಾಗೂ ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಒಪ್ಪಂದಗಳನ್ನು ಜಾರಿಗೊಳಿಸಲು ಪ್ರಚಾರ ನಡೆಸುವುದು.

೬. ಮಾನವ ಹಕ್ಕುಗಳನ್ನು ಕುರಿತಂತೆ ಮಾಹಿತಿ ಸಂಗ್ರಹಿಸಿ, ಮಾನವ ಹಕ್ಕುಗಳ ಗುಂಪು ಹಾಗೂ ಕಾರ್ಯಕರ್ತರಿಗೆ ಪೂರೈಸುವುದು. ಮಾನವ ಹಕ್ಕುಗಳ ಕುರಿತಂತೆ ಪತ್ರಿಕೆಯನ್ನು ಪ್ರಕಟಿಸುವುದು.

೭. ಮಾನವ ಹಕ್ಕು ಉಲ್ಲಂಘನೆ ಪ್ರಕರಣಗಳಲ್ಲಿ ಸತ್ಯಶೋಧನೆ ಮಾಡುವುದು, ಏನು ಕ್ರಮ ಕೈಗೊಳ್ಳಲಾಗಿದೆ ಎನ್ನುವುದನ್ನು ಗಮನಿಸುವುದು.

೮. ದಲಿತರು, ಅಲ್ಪಸಂಖ್ಯಾತರು ಹಾಗೂ ಶೋಷಿತರ ಬದುಕುವ ಹಕ್ಕಿಗಾಗಿ ಹಾಗೂ ಅವರಿಗೆ ನ್ಯಾಯ ದೊರಕಿಸಿಕೊಡಲು ಹೋರಾಡುತ್ತಿರುವ ಸಂಘಟನೆಗಳನ್ನು ಬೆಂಬಲಿಸುವುದು.

೧೦. ಮಾನವ ಹಕ್ಕುಗಳ ಸಂಘಟನೆಗಳೊಡನೆ ಪರಸ್ಪರ ಸಹಕರಿಸಬಹುದಾದ ಹಾಗೂ ಒಟ್ಟಿಗೆ ಕೆಲಸ ಮಾಡಬಹುದಾದ ಕ್ಷೇತ್ರಗಳನ್ನು ಗುರುತಿಸಿ ಕಾರ್ಯಜಾಲವೊಂದನ್ನು ರಚಿಸುವುದು.

### ನೀವು ಹೇಗೆ ಸಹಾಯ ಮಾಡಬಹುದು?

- ಸ್ವಯಂಸೇವಕರಾಗಿ ನಿಮ್ಮ ಸಹಾಯ, ಕೌಶಲ್ಯವನ್ನು ಬಳಸಬಹುದು.
- 5000 ರೂ. ನೀಡಿ ಪೋಷಕರಾಗಬಹುದು.
- 1000ರೂ. ದೇಣಿಗೆ ನೀಡಿ ದಾತೃವಾಗಬಹುದು.
- ಪ್ರತಿ ತಿಂಗಳೂ 100 ರೂ. ನೀಡಿ ನಮ್ಮನ್ನು ಬೆಂಬಲಿಸಬಹುದು.
- 1000 ರೂ. ಗಳ ಅಥವಾ ಅದಕ್ಕಿಂತ ಹೆಚ್ಚು ಮೊತ್ತವನ್ನು ೫ ವರ್ಷಗಳ ಕಾಲ ಬಡ್ಡಿರಹಿತ ಸಾಲ ನೀಡಬಹುದು.
- ಸಾಧ್ಯವಿದ್ದಲ್ಲೆಲ್ಲ ಅನ್ಯಾಯವನ್ನು ವಿರೋಧಿಸುವ ಮೂಲಕ, ಮಾನವ ಹಕ್ಕುಗಳ ಕಾರ್ಯಕರ್ತರಾಗಬಹುದು.
- ನಮ್ಮ ಬಗ್ಗೆ ಸ್ನೇಹಿತರಿಗೆ ಹೇಳಿ, ವಿಷಯವನ್ನು ಹರಡಬಹುದು.

---



SICHREM

TO MAKE HUMAN RIGHTS
A HOUSEHOLD CONCEPT

ಸಿಕ್ರಂ

(ದಕ್ಷಿಣ ಭಾರತ ಮಾನವ ಹಕ್ಕುಗಳ ಶಿಕ್ಷಣ ಮತ್ತು ಸಂರಕ್ಷಣಾ ಘಟಕ)

ನಂ. 35, ಆಂಜನಪ್ಪ ಕಾಂಪ್ಲೆಕ್ಸ್, ಹೆಣ್ಣೂರು ಮುಖ್ಯ ರಸ್ತೆ

ಲಿಂಗರಾಜಪುರ ಬೆಂಗಳೂರು - 560 084

Ph: 5473922, 5492856